ಶ್ರೀರಂಗ—ಸಾರಸ್ವತ

೧

# ನಿರಾಹಾರ

ಬರಗಾಲ ಏಕಾಂಕಗಳ ಸಂಗ್ರಹ

ಶ್ರೀರಂಗ




ರಂಗ ಮಂಗ ಪ್ರಕಾಶನ
ಧಾರವಾಡ

ಜೂನ್ : ೧೯೪೪ ಬೆಲೆ : ೧೨ ಆಣೆ

ಮುದ್ರಕರು:
ಎನ್. ಎಸ್. ಬೆಂಗೇರಿ
ವಿಜಯ ಮುದ್ರಾಲಯು,
ಧಾರವಾಡ

ಪ್ರಕಾಶಕರು:
ಎಚ್. ಎಸ್. ಪಾಟೀಲ
ರಂಗ ಮಂಗ ಪ್ರಕಾಶನ
ಧಾರವಾಡ

# ನಮ್ಮ ಯೋಜನೆಯ ಅರಿಕೆ

ರಂಗ ಮಂಗ ಪ್ರಕಾಶನದ ಕೆಲಸವು ಕಾರಣಾಂತರದಿಂದ ತಡೆಯಲ್ಪಟ್ಟಿತ್ತು. ಯುದ್ಧದ ಮೂಲಕ ಹೆಚ್ಚೇರಿದ ಕಾಗದದ ಬೆಲೆಯು ಒಂದು ಕಾರಣ ಆ ಕಾರಣ ಈಗಲೂ ಇದೆ. ಆದರೆ ಉಳಿದ ಕೆಲ ಅನುಕೂಲತೆಗಳು ಈಗ ಒದಗಿಬಂದದ್ದರಿಂದ ಪ್ರಕಾಶನ ಕಾರ್ಯವನ್ನು ಮತ್ತೆ ಕೈಕೊಂಡಿದ್ದೇವೆ.

ರಂಗ ಮಂಗ ಪ್ರಕಾಶನದಲ್ಲಿ ಶ್ರೀ ಜಾಗಿರದಾರರ ಎಲ್ಲ ಕೃತಿಗಳು ಅಚ್ಚಾಗುವುವು. 'ಶ್ರೀರಂಗ ಸಾರಸ್ವತ' ಎಂಬ ತಲೆಕಟ್ಟಿನಲ್ಲಿ ಅವರ ಏಕಾಂಕಗಳ ಸಂಗ್ರಹ, ಹರಟೆಗಳ ಸಂಗ್ರಹ, ನಾಟಕಗಳು, ವಿಮರ್ಶಾತ್ಮಕ ಬರೆಹಗಳು, ವಿವೇಚನಾತ್ಮಕ ಗ್ರಂಥಗಳು ಪ್ರಕಟವಾಗುವುವು.

ಶ್ರೀರಂಗರ ಕೃತಿಗಳ ಒಗ್ಗಂಟಿನ ಹೆಬ್ಬೊತ್ತಿಗೆ (Omnibus Volume) ಮಾಡಿಸುವೆವೆಂದು ಈ ಮೊದಲು ಪ್ರಕಟಿಸಿದ್ದೆವು. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಕಾಗದ ಸಿಕ್ಕರೂ ಒಳ್ಳೆಯ ಕಾಗದವಿಲ್ಲವೆಂಬುದಕ್ಕೆ ಆ ವಿಷಯವನ್ನು ಕೆಲಕಾಲ ಮುಂದೂಡಿದ್ದೇವೆ.

ಶ್ರೀರಂಗರ ಕೃತಿಗಳಲ್ಲದೆ, ಶ್ರೀಯುತರಾದ ಬೆಟಗೇರಿ ಕೃಷ್ಣಶರ್ಮರು, ಎಚ್. ಎಸ್. ಪಾಟೀಲರು, ಹೆಬ್ಬಳ್ಳಿ ಕೃಷ್ಣಮೂರ್ತಿಗಳು, ಅಮೀನ್ ಅವರು, ನೆಗಳೂರ ರಂಗನಾಥರು, ಇನ್ನೂ ಕೆಲ ಗೆಳೆಯರು ತಮ್ಮ ಕೃತಿಗಳನ್ನು ಪ್ರಕಾಶನದಲ್ಲಿ ಅರಳಿಸಲು ಒಪ್ಪಿಗೆ ಇತ್ತಿದ್ದಾರೆ. ಅವರ ಕೃತಿಗಳ ಬರವನ್ನು ಆಗಾಗ ಡಂಗುರಿಸುವೆವು.

ವ್ಯವಹಾರದ ಕರಾರು-ಕಟ್ಟುಗಳಿಗಾಗಿ, 'ವಿವರಗಳಿ'ಗಾಗಿ ೨ ಆಣೆಯ ಅಂಚೆ ಚೀಟಿ ಕಳಿಸಬೇಕು.

ಈ 'ನಿರಾಹಾರ'ದ ಪ್ರಕಟನೆಯೊಂದಿಗೆ 'ಶ್ರೀರಂಗಸಾರಸ್ವತ'ದ ಪ್ರಕಟನೆಯು ಪ್ರಾರಂಭವಾಯಿತೆನ್ನಬಹುದು. 'ಕಲಿತ ಕನ್ನಡನಾಡು,' 'ಭಾಗ್ಯದ ಬರಗಾಲ', 'ಹಸಿವೆಯ ಹಗಲುಗನಸು' 'ಬಕಾಸುರ' ಇವು ಮೊದಲು ಜಯಂತಿಯಲ್ಲಿ ಅಚ್ಚಾಗಿದ್ದುವು. 'ಬೀದಿಯ ಭೂತ' ಉಷಾ ಪತ್ರಿಕೆಯಲ್ಲಿ, 'ನಿರಾಹಾರದ ನೀತಿಯು' 'ತಮಾಷೆ' ಪತ್ರಿಕೆಯಲ್ಲಿ. ಮುನ್ನೋಟವು ಹೊಚ್ಚಹೊಸದು.

ತಮ್ಮ ಕೃತಿಗಳನ್ನು ರಂಗ ಮಂಗ ಪ್ರಕಾಶನದಲ್ಲಿ ಪ್ರಕಟಿಸಲು ಅನುಮತಿಯಿತ್ತುದಕ್ಕೆ ಪ್ರಕಾಶನವು ಶ್ರೀರಂಗರಿಗೆ ಋಣಿ. ಶ್ರೀರಂಗರ ಹೊತ್ತಿಗೆಗಳಿಗೆ ಮೇಲೋಲೆಯನ್ನು ಸಿದ್ಧಪಡಿಸುವುದರಲ್ಲಿ ನೆರವಿತ್ತ ಹೂಬಳ್ಳಿಯ ಹೆಣ್ಣುಮಕ್ಕಳ ಹಾಯ್‌ಸ್ಕೂಲಿನಲ್ಲಿ ಅಧ್ಯಾಪಕರಾಗಿರುವ ಕಲಾವಿದ ಶ್ರೀ ಶಿಗ್ಗಾಂವಿಯವರಿಗೂ ಧಾರವಾಡದ ಕಮರ್ಶಿಯಲ್ ಆರ್ಟ ಎಕೆಡೆಮಿಯ ಸಂಚಾಲಕ ಕಲಾವಿದ ಶ್ರೀ ಮಾಂಜರೇಕರ ಅವರಿಗೂ ನಮ್ಮ ಕೃತಜ್ಞತೆಗಳು. ವಿಜಯ ಮುದ್ರಾಲಯದ ಒಡೆಯರಿಗೆ ನಮ್ಮ ವಂದನೆಗಳು.

ಜೂನ
೧೯೪೪

ಒಡೆಯರು
**ರಂಗ ಮಂಗ ಪ್ರಕಾಶನ**
C/o ಜಯಂತಿ, ಧಾರವಾಡ

---

# ಪರಿವಿಡಿ

# ಕಲಿತ ಕನ್ನಡ ನಾಡು

( ಒಂದು ಅಣಕವಾಡು )

[ ಈ ವ್ಯಂಗ್ಯಕ್ಕೆ ಮೂಲವಾಗಿರುವ ಕರ್ನಾಟಕ ಗೀತವನ್ನು ಬರೆದ ಶ್ರೀ. ಹುಯಿಲಗೋಳ ನಾರಾಯಣರಾಯರ ಮತ್ತು ಆ ಗೀತವನ್ನು ಅಭಿಮಾನದಿಂದ ಹಾಡುವ ಅಖಂಡ ಕರ್ನಾಟಕದ ಜನರ ಕ್ಷಮೆಯನ್ನು ಬಯಸಿ ಬರೆದುದು—ಶ್ರೀರಂಗ. ]

ಉದಯವಾಗಿದೆ ನಮ್ಮ ಕಲಿತ ಕನ್ನಡನಾಡು ।
ಬದುಕು—ಬಲವದು ಕಳೆದ ದುರಭಿಮಾನದ ಗೂಡು ॥ ಪ ॥

ಸೌಜನ್ಯರಿಪುವೆನಿಸ ಜಾತಿಜಗಳದ ನಾಡು ।
ಆ ಜಲಧಿಗಳ ತೊರೆದು ಸರಿದುಕೊಂಡಿಹ ನಾಡು ॥
ಓಜೆಯಿಂ ನೆರೆಯವರ ಕಡಿದು ಬೀಳುವ ಪಾಡು ।
ಸೋಜಿಗವು ನಮಗೇಕೆ? ಹೇಡಿಗೊಪ್ಪುವ ನಾಡು ॥ ೧ ॥

ಲೆಕ್ಕವಿಲ್ಲದ ಸಂಘ–ಸಂಸ್ಥೆ–ಫಂಡಿನ ನಾಡು ।
ಕಿಕ್ಕಿರಿವ ಸಭೆಸಮಾರಂಭಗಳ ಭಲೆ ನೋಡು; ॥
ಚೊಕ್ಕಮತಗಳ ಸಾರುವವರಿಗಿದು ಸಾಯ್ನಾಡು ।
ತಕ್ಕುದೆನೆ ಹಿಂದುಳಿದ ಹಿಂದುದೇಶದ ನಾಡು ॥ ೨ ॥

ಪಾವನೆಯರಾ ಕೃಷ್ಣೆ ಭೀಮೆಯರ ತಾಯ್ನಾಡು ।
ಕಾವೇರಿ ಗೋದೆಯರು ನ್ಯೈದೊಳೆವ ನಲುನಾಡು ॥
ಆವಗಂ ಬರಗಾಲ ಬವಣೆ ಬಿಡದಾ ನಾಡು ।
ಕಾವಿನಿಂ ಸಿಡಿದ ಸಿರಿರಂಗನಾಟದ ಬೀಡು । ೩ ॥

ಉದಯವಾಗಿದೆ ನಮ್ಮ ಕಲಿತ ಕನ್ನಡನಾಡು ।
ಬದುಕು—ಬಲವದು ಕಳೆದ ದುರಭಿಮಾನದ ಗೂಡು ॥

# ನಿರಾಹಾರದ ನೀತಿ

ನಮ್ಮ ಪುಣ್ಯಭೂಮಿಯಾದ ಭರತವರ್ಷವು ಎಂದಿನಿಂದಲೂ ದೇವತೆಗಳಿಗೆ ತವರ್ಮನೆಯಾದಂತಾಗಿದೆ; ದೇವರುಗಳಿಗೆ ಮಾನವನ ಮನೆಯುಂತಾಗಿದೆ. ಆದಕ್ಕಾಗಿ ಪ್ರಾಚೀನ ಕಾಲದಿಂದಲೂ ಮೂವತ್ಮೂರು ಕೋಟಿ ದೇವತೆಗಳೆಲ್ಲ ನಮ್ಮ ದೇಶವನ್ನೇ ತಮ್ಮ ಕಾಯಂ ನಿವಾಸವಾಗಿ ಮಾಡಿಕೊಂಡಿದ್ದರೆ ಆಶ್ಚರ್ಯವಲ್ಲ. ದೇವ ದೇವತೆಗಳೆಂದರೆ ಕೇವಲ ಒಂದು ಪಂಗಡದವರು ಮಾತ್ರ ಎಂದು ತಿಳಿಯತಕ್ಕದ್ದಲ್ಲ. ಕಾಲಾನುಸಾರದ ಪ್ರಗತಿಯನ್ನನುಸರಿಸಿ ಎಲ್ಲತರದ ಎಲ್ಲ ಜಾತಿಯವರ, ಎಲ್ಲ ಧರ್ಮಗಳ ದೇವ-ದೇವತೆಯವರು ನಮ್ಮಲ್ಲಿ ಬಂದು, ಬದುಕಿ, ಬೆಳೆಯುತ್ತಲಿದ್ದಾರೆ. ಕಾಲಾನುಸಾರವಾಗಿ ಹಿಂದುಸ್ಥಾನದ ಮಾನವ ಜನಸಂಖ್ಯೆ ಬೆಳೆದಿದೆ, ಆದರೆ ದೇವತೆಗಳು ಮಾತ್ರ ಎಂದಿನಿಂದಲೂ ಮೂವತ್ಮೂರು ಕೋಟಿ ಎಂದು ನಿಯತ ಸಂಖ್ಯೆಯಾಗಿಯೆ ಉಳಿದುದು ಹೇಗೆ—ಎಂದು ಕೆಲವರು ಕೇಳಬಹುದು ದೇವತೆಗಳು ಅದಾವ ಶಕ್ತಿಯಿಂದ ತಮ್ಮ ಜನಸಂಖ್ಯೆಯನ್ನು ನಿಯತವಾಗಿಟ್ಟುಕೊಂಡಿದ್ದಾರೆಯೊ ಅದು ನಮ್ಮ ಮಾನವಮಾತ್ರ ಬುದ್ಧಿಗೆ ಹೊಳೆಯದು. ಒಂದು ಮಾತನ್ನು ಮಾತ್ರ ಹೇಳಬಹುದು. ತಮ್ಮ ಸಂಖ್ಯೆಯನ್ನು ಇದ್ದಂತೆ ಇಟ್ಟುಕೊಂಡುದಕ್ಕೆ ದೇವದೇವತೆಗಳ ಆರೋಗ್ಯ ಜೀವನ ಸುಖ ಸಮಾಚೀನಗಳು ಸಾಕಷ್ಟಾಗಿವೆ. ಅದಿರಲಿ. ಈಗ ನಾವು ಹೇಳಬೇಕೆಂದಿರುವ ಮಾತು ಅದಲ್ಲ. ಜಗತ್ತಿನ ಅಸಂಖ್ಯಾತ ದೇಶಗಳನ್ನು ಬಿಟ್ಟು ಈ ದೇವ ದೇವತೆಗಳು ನಮ್ಮ ಭರತಭೂಮಿಯನ್ನೇ ತಮ್ಮ ಚಿರಂತನ ನಿವಾಸಸ್ಥಾನವೆಂದು ಆಯ್ದುಕೊಂಡುದೇಕೆ ಎಂಬ ಹಿರಿಯ ಮತ್ತು ಹೆಮ್ಮೆಯ ಪ್ರಶ್ನೆಗೆ ಉತ್ತರವನ್ನು ಹುಡುಕುವುದು ಈ ಲೇಖದ ಮೂಲೋದ್ದೇಶವಾಗಿದೆ.

ಈ ಪ್ರಶ್ನೆ ಹಿರಿಯದು: ಯಾಕೆಂದರೆ, ನಮ್ಮ ದೇಶದ ಸಾವಿರಾರು ವರ್ಷಗಳ ಇತಿಹಾಸ ಇದರಲ್ಲಿ ಅಡಕವಾಗಿದೆ. ದೇವ ದೇವತೆಗಳು ಎಂದಿನಿಂದಲೂ ನಮ್ಮಲ್ಲಿದ್ದಾರೆ; ಎಲ್ಲ ಕಡೆಗಳಿಂದಲೂ ನಮ್ಮಲ್ಲಿ ಬಂದಿದ್ದಾರೆ; ಭಿನ್ನಭಿನ್ನ ಜಾತಿ ಜನಾಂಗ ದೇಶ ಧರ್ಮ ಮತ ಪಂಥಗಳವರಾದರೂ ಹೊರಗಿನ ವ್ಯವಹಾರಕ್ಕೆ ಒಂದುಗೂಡಿಯೆ ಇದ್ದಾರೆ. ಇದೆಲ್ಲ ಇತಿಹಾಸವನ್ನು ನಾವು ಬಿಡಿಸಿ ಹೇಳಬೇಕಾಗುವುದು; ಕೊನೆಗೆ ಇನ್ನೊಬ್ಬರು ಹೇಳಿದರೆ

ಅದನ್ನು ತಿಳಿದುಕೊಳ್ಳಲಾದರೂ ಬೇಕಾಗುವುದು. ನಮ್ಮದು ಸುವರ್ಣದೇಶ; ಯಾವ ದಿಕ್ಕಿನಿಂದ ನೋಡಿದರೂ ಮಿಂಚುತ್ತ, ಮೆರೆಯುತ್ತ ಕಾಣಿಸುವುದು; ಅದಕ್ಕಾಗಿ ಎಲ್ಲ ದಿಕ್ಕುಗಳಿಂದಲೂ ಈ ದೇವತೆಗಳು ನಮ್ಮಲ್ಲಿಯೆ ಬಂದರು. ಒಂದು ಕಡೆ ಹತ್ತಲಾಗದ ಹಿಮಾಲಯ, ಇನ್ನೊಂದು ಕಡೆ ದಾಟಲಾಗದ ಸಮುದ್ರ; ಆದ್ದರಿಂದ ಬರ್ಫದ ಮೇಲಾಟಗಳಲ್ಲಿ ಕಾಲು ಜಾರಿದವರು, ಸಮುದ್ರದ ನೀರಿನಲ್ಲಿ ತೇಲಿದವರು ತಪ್ಪದೆ ನಮ್ಮ ದೇಶಕ್ಕೇಯೆ ಬಂದು ತಟ್ಟಿದರು. ನಮ್ಮದು ನದಿ-ನದಗಳ ದೇಶ, ಗಿಡ ಗುಡ್ಡಗಳ ಪ್ರದೇಶ; ಅದ ಕ್ಕಾಗಿ ಮತ್ಸ್ಯ, ಕೂರ್ಮ ವರಾಹ ನಾರಸಿಂಹರೆಲ್ಲ ಇಲ್ಲಿಯೇ ಅನಿವಾರ್ಯ ವಾಗಿ ಬರುವಂತಾಯಿತು. ಕೊಡಲಿಯವರು, ಆಕಳ ಕಾಯುವವರು ಇಂತಹ ದೇವದೇವತೆಗಳಿಗೆಲ್ಲ ನಮ್ಮ ನಾಡು-ವಿಶೇಷವಾಗಿ ಅದರಲ್ಲಿಯ ಕಾಡು-ಅತ್ಯಂತ ಪ್ರೀತಿಯ ನಿವಾಸಸ್ಥಾನವಾಯಿತು. ಈ ಇತಿಹಾಸವು ದೊಡ್ಡದಿದೆ. ಅದಕ್ಕಾಗಿಯೆ ಮೇಲಿನ ನಮ್ಮ ಪ್ರಶ್ನೆ ಹಿರಿಯ ಪ್ರಶ್ನೆ ಎಂದು ಹೇಳಿದ್ದು.

ಪ್ರಶ್ನೆ ಮೇಲೆ ಹೇಳಿದಂತೆ ಎಷ್ಟು ಹಿರಿಯದಾಗಿದೆಯೊ ಅಷ್ಟೆ ಹೆಮ್ಮೆ ಯದೂ ಆಗಿದೆ. ಇಡಿಯ ಲೋಕಾನುಲೋಕ ಬ್ರಹ್ಮಾಂಡದಲ್ಲಿ ನಮ್ಮ ನಾಡನ್ನೆ ದೇವದೇವತೆಗಳೂ ಆಯ್ದುಕೊಂಡುದು ಹೆಮ್ಮೆಯ ವಿಷಯವಲ್ಲವೆ? ಆದರೆ ದೇವದೇವತೆಗಳು ಆಯ್ದುಕೊಂಡಮಾತ್ರಕ್ಕೆಯೆ ಹೆಮ್ಮೆ ಮುಗಿಯಲಿಲ್ಲ. ಆಯ್ದುಕೊಂಡಂದಿನಿಂದ ಇಂದಿನವರೆಗೆ ನಮ್ಮಲ್ಲಿಯೆ ಉಳಿದುಕೊಂಡಿದ್ದಾರೆ. ಈ ದೇವ ದೇವತೆಗಳು! ಇದು ನಿಜವಾಗಿ ಹೆಮ್ಮೆಗೆ ಕಾರಣ, ಅಷ್ಟೇಕೆ ಕೆಲ ಕೆಲರಂತೂ (ಉದಾಹರಣೆಗಾಗಿ ವಿಶ್ವೇಶ್ವರ, ಜಗನ್ನಾಥ, ವೆಂಕಟೇಶ ಮುಂತಾಗಿ) ಮೊದಲು ಬಂದಾಗ ಯಾವ ಊರಲ್ಲಿ, ಯಾವ ಬೀದಿಯಲ್ಲಿ, ಯಾವ ಮನೆಯನ್ನು ಮಾಡಿಕೊಂಡರೊ ಇಂದಿಗೂ ಅದೇ ಊರಲ್ಲಿ, ಅದೇ ಬೀದಿಯಲ್ಲಿ, ಅದೇ ಮನೆಯಲ್ಲಿ ಉಳಿದುಕೊಂಡಿದ್ದಾರೆ! ಇದಲ್ಲವೆ ಹೆಚ್ಚಿನ ಹೆಮ್ಮೆಗೆ ಕಾರಣ?

ನಾವು ಪಟ್ಟುಕೊಳ್ಳುವ ಹೆಮ್ಮೆ ವಾಸ್ತವಿಕವಾದುದು, ಸಯುಕ್ತಿಕ ವಾದುದು ಎಂಬುದರಲ್ಲಿ ಸಂದೇಹವೆ ಇಲ್ಲ. ಹೊರಗಿನಿಂದ ಹೀಗೆ ಬಂದ ಹಿರಿಯರನ್ನು ಯಾವ ರೀತಿಯಲ್ಲಿ ತಂಗಿಸಿರುವೆವೆಂಬುದನ್ನು ನೋಡಿದರೆ ಈ

ಮಾತು ಸ್ಪಷ್ಟವಾಗುವುದು. ಸರ್ವಸಾಮಾನ್ಯವಾಗಿ ಎಲ್ಲ ದೇವದೇವತೆಗಳಿಗೂ ಉಚಿತವಾದ–ಎಂದರೆ ಬಾಡಿಗೆ ಇಲ್ಲದ (ಮೇಲೆ ದುರುಸ್ತಿಯ ವೆಚ್ಚವೂ ನಮ್ಮದೆ!) ಮನೆಗಳನ್ನು ಕೊಟ್ಟಿರುವೆವು. ಅಥವಾ 'ಕೊಟ್ಟಿರುವೆವು' ಎಂಬುದು ಸರಿಯಾಗಲಿಕ್ಕಿಲ್ಲ, **ಕಟ್ಟಿಸಿ ಕೊಟ್ಟಿರುವೆವು;** ಅವರವರ ಯೋಗ್ಯತೆ ಅನುಕೂಲತೆಗಳಿಗೆ ತಕ್ಕುದಾಗುವಂತೆ ಮುದ್ದಾಮ ಮನೆಗಳನ್ನೆ ಕಟ್ಟಿಸಿಕೊಟ್ಟಿರುವೆವು. ಭದ್ರವಾದ ಕಟ್ಟಡ, ವಿಶಾಲವಾದ ಅಂಗಣ, ಎತ್ತರವಾದ ನಿಲವು, ಸೊಗಸಾದ ಶೈಲಿ ಇವು ಈ ದೇವಮನೆಗಳ ವೈಶಿಷ್ಟ್ಯಗಳು. ಇದಲ್ಲದೆ, ಪಾಪ! ಹೊರಗಿನಿಂದ ಬಂದ ಜನ! ಅವರಿಗೆ ಇಲ್ಲಿ ತಮ್ಮದೆಂಬುದು ಏನೂ ಇಲ್ಲವಲ್ಲ ಎಂಬ ನಿರ್ಗತಿಕ ಸ್ಥಿತಿ ಒದಗಬಾರದೆಂದು ಒಬ್ಬೊಬ್ಬರಿಗೆ ಚಿರಂತನವಾಗಿ ತೋಟ, ಪಟ್ಟಿ, ಹೊಲ, ಗದ್ದೆ ಮೊದಲಾಗಿ ಉತ್ಪನ್ನಕ್ಕೆ ಆಸರವನ್ನು ಹಾಕಿಕೊಟ್ಟಿರುವೆವು. ವರ್ಷಕ್ಕೊಮ್ಮೆ ಅವರ ಅಧ್ಯಕ್ಷತೆಯಲ್ಲಿ ಸಭೆ ಸಮ್ಮೇಳನಗಳನ್ನು ಸೇರಿಸುವೆವು.

ನಮ್ಮಿಂದ ಈ ರೀತಿ ಸಹಾಯವನ್ನೂ ಆಶ್ರಯವನ್ನೂ ದೊರಕಿಸಿಕೊಂಡುದಕ್ಕೆ ಈ ದೇವ ದೇವತೆಗಳು ನಮ್ಮ ಕೃತಜ್ಞತೆಯನ್ನು ಸ್ಮರಿಸುವ ಕೂಲಿಯಾಳುಗಳಂತಿದ್ದಾರೆಂದು ಯಾರಾದರೂ ತಿಳಿದರೆ ಶಾಂತಂ ಪಾಪಂ! ಕೃತಜ್ಞತೆಯ ಬಲೆಯಲ್ಲಿ ಬಂದ ನಿರಾಶ್ರಿತರನ್ನು ಬಿಗಿದಿಡುವುದು ಆರ್ಯ ಸಂಸ್ಕೃತಿಗೆ ಅವಮಾನ, ದಾನ–ಧರ್ಮ ದೃಷ್ಟಿಯಿಂದ ಪಾಪ. ಅಂತಹ ಅವಮಾನವನ್ನು ಉಳಿಸಿಕೊಳ್ಳುವುದಕ್ಕೆ, ಆ ಪಾಪವನ್ನು ತಪ್ಪಿಸಿಕೊಳ್ಳುವದಕ್ಕೆ ನಾವು ಹೊಸತೊಂದು ಯುಕ್ತಿಯನ್ನು ಹೂಡಿದ್ದೇವೆ. ನಮ್ಮಿಂದ ಸಲ್ಲುವ ಸವಲತ್ತು ಸಲಕರಣೆಗಳೆಲ್ಲ ಉಪಕಾರದ್ದಲ್ಲ, ಸೇವೆ ಎಂಬ ಭಾವನೆಯನ್ನು ಅವರಲ್ಲಿ ಬಿಂಬಿಸಿಬಿಟ್ಟಿದ್ದೇವೆ. ಅವರು ಕೃತಜ್ಞರಾಗಬೇಕಾಗಿಲ್ಲ. ನಾವು ನಮ್ಮ ಕರ್ತವ್ಯ ಮಾಡಿದಂತೆ ಎಂದು ನಮ್ಮವರ ಸಂಬಂಧವನ್ನು ಶಾಸ್ತ್ರಿಸಿದ್ದೇವೆ. ಇದು ಕೇವಲ ಔಪಚಾರಿಕವಾದುದಲ್ಲ ಎಂದು ತೋರಿಸಲು ಕೆಲವು ಕೃತಿಗಳನ್ನೂ ಕೈಕೊಂಡಿದ್ದೇವೆ. ದೃಷ್ಟಾಂತಕ್ಕಾಗಿ, ಈ ದೇವದೇವತೆಗಳು ಮೇಲಿನವರು ನಾವು ಕೆಳಗಿನವರು ಎಂತಿದ್ದೇವೆ. ಇವರು ನಮ್ಮ ದೊರೆ, ನಾವು ಇವರ ಆಜ್ಞಾಧಾರಕರು ಎನ್ನುವಂತೆ ವ್ಯವಹರಿಸುತ್ತಿದ್ದೇವೆ. ಇವರನ್ನು ಕಾಣುವಾಗ ದೂರದಿಂದಲೆ ಬಾಗಿ, ಕೈಮುಗಿದು, ಗಲ್ಲಗಲ್ಲ ಬಡೆದುಕೊಂಡ

ವಿನಯದಿಂದ ನಿಲ್ಲುತ್ತೇವೆ. ಇವರನ್ನು ನಾವು ಸಹಸಾ ಮುಟ್ಟುವುದಿಲ್ಲ ಕೂಡ. ನಮ್ಮಿಂದ ಇವರ ಮನೆಗಳು ಬೇರೆ ಭಾಗದಲ್ಲಿ. ಸಾಮಾಜಿಕವಾಗಿ ಇವರೊಡನೆ ಬೆರೆತು ಮಾತುಕತೆಗಳನ್ನಾಡುವ ಉದ್ಧಟತನದಿಂದ ವರ್ತಿಸುವುದಿಲ್ಲ. ಸಮಯ ದೊರೆತಾಗ, ಮಡಿಯಲ್ಲಿದ್ದಾಗ ಇವರ ವೇಷ ಭಾಷೆ ವಿಚಾರಗಳನ್ನು ಅನುಕರಿಸುತ್ತೇವೆ. ಹೆಚ್ಚೇನು? ನಮ್ಮಿಂದ ಈ ದೇವದೇವತೆಗಳ ಉಪ ಜೀವನವಲ್ಲ, ಇವರಿಂದಲೆ ನಮ್ಮ ಉಪಜೀವನ ಎಂಬ ವಿಪರ್ಯಸ್ತ ಪರಿಸ್ಥಿತಿ ಯಲ್ಲಿ ಇವರ ನಂಬುಗೆಯನ್ನು ಹುಟ್ಟಿಸಿದ್ದೇವೆ! ಹೀಗಿರುವಾಗ ಕೃತಜ್ಞತೆಯ ಅವಮಾನ ನಮಗೆ ತಟ್ಟುವುದಾದರೂ ಹೇಗೆ? 'ದೇವಾ, ನೀ ನನ್ನ ದೊರೆ, ನಾ ನಿನ್ನ ಪ್ರಜೆ; ಅದಕ್ಕಾಗಿ ನಿನಗೆ ಕರವನ್ನು ಸಲ್ಲಿಸುವೆ' ಎಂಬುವ ಮಟ್ಟಿಗೂ ನಾವು ಪರಿಸ್ಥಿತಿಯನ್ನು ಮಾರ್ಪಡಿಸಿಕೊಂಡಿದ್ದೇವೆ. ಮನೆಗೆ ಬಂದ ಅತಿಥಿಯನ್ನು ಹೀಗೆ ಸನ್ಮಾನಿಸುವುದು ಆರ್ಯ ಗೃಹಸ್ಥನ ವೈಶಿಷ್ಟ್ಯ ವಾಗಿದೆ

ಇದೆಲ್ಲವೂ ಸೋಗು, ಕಪಟ, ವಂಚನೆ ಇಲ್ಲವೆ ಅತಿಶಯೋಕ್ತಿ ಎಂದು ಕೆಲವರಿಗೆ ಎನ್ನಿಸಬಹುದು. ಇಂತಹರಿಗಾಗಿ ಒಂದು ವಾಸ್ತವಿಕ ದೃಷ್ಟಾಂತ ವನ್ನು ಕಾಣಿಸುವೆ. ಅದನ್ನು ನೋಡಿದರೆ ನಾವು ನಿಜವಾಗಿಯೆ ನಿರ್ವಂಚನೆ ಯಿಂದ ನಡೆದುಕೊಂಡಿದ್ದೇವೆ ಎಂಬುದು ಸ್ಪಷ್ಟವಾಗುವುದು. ಈ ದೇವದೇವತೆ ಗಳಲ್ಲಿ ಕೆಲವರು ಯಾವುದೊ ಕಾರಣಕ್ಕಾಗಿ ಒಂದೊಂದು ತರದ ಪಥ್ಯದ ಮೇಲಿದ್ದಾರೆ. ಅನಾರೋಗ್ಯವಿರಬಹುದು, ಅರುಚಿ ಇರಬಹುದು. ನಾವು ಅದನ್ನು ವಿಮರ್ಶಿಸಲು ಹೋಗಲೇ ಇಲ್ಲ. ವಿಷ್ಣು ಎಂಬುವನು ತನಗೆ ಹಾಲಿನ ಪಥ್ಯ (Milk diet) ವಿದೆ ಎಂದನು, ಕೂಡಲೆ ಅವನಿಗೆ ತಕ್ಕ ಏರ್ಪಾಟವನ್ನು ಮಾಡಿದೆವು. ಶಿವ ಎಂಬವನಿಗೆ ಯಾವುದೊ ವಿಷಯುಕ್ತ (Patent Medicine) ಬೇಕಂತೆ; ಅದನ್ನು ಒದಗಿಸಿದೆವು. ಇಂದ್ರನಿಗೆ ಔಷಧಿ ಯಾಗಿ ಒಂದು ಉನ್ಮಾದಕ ಪೇಯ ಬೇಕಿತ್ತು; ಅದನ್ನೂ ಕೊಟ್ಟೆವು. ಇಷ್ಟೇಕೆ? ಯಾವ ರೀತಿಯಿಂದಲೂ, ಯಾವ ಕಾಲಕ್ಕೂ ಇವರಿಗೆ ಕೊರತೆ ಯಾಗಬಾರದೆಂಬ ಉದ್ದೇಶದಿಂದ ಪ್ರತಿ ಹದಿನೈದು ದಿವಸಗಳಿಗೊಮ್ಮೆ ನಾವಾಗಿಯೆ ನಿರಾಹಾರವನ್ನು ಕೈಕೊಳ್ಳುವೆವು. ಈ ಏಕಾದಶಿಯ ದೃಷ್ಟಾಂತ ಕ್ಕಿಂತ ನಮ್ಮ ನಿರ್ವಂಚನಾಬುದ್ಧಿಗೆ ಹೆಚ್ಚಿನ ಶಿಫಾರಸ ಪತ್ರ ಬೇಕೆ?

---

# ಮುನ್ನೋಟ

ಇಲ್ಲವೆ

# ಬರೆಯುವ ಕೈ = ಬರೆಗೈ

( ಒಂದು ಸ್ವಗತ ಸಂಭಾಷಣೆ )

ಪಾತ್ರಗಳು :

ನಾಟಕಕಾರ

• ಪಾಹವ್ಯಾ 'ಕಾತ

ತರುಣ

## ರಂಗಸೂಚಿಕೆ

[ಒಂದು ಕೋಣೆ. ಬೆಳಗಿನ ೧೦ ಗಂಟೆಯ ಸಮಯ. ಕೋಣೆಯಲ್ಲಿ (ಪ್ರೇಕ್ಷಕರ) ಬಲಬದಿಯ ಮೂಲೆಗೆ ಪುಸ್ತಕಗಳಿಂದಲೂ ಪತ್ರಿಕೆಗಳಿಂದಲೂ ತುಂಬಿದ ಶೆಲ್ಫುಗಳು ನಿಂತಿವೆ. ಆ ಸಾಹಿತ್ಯಕ್ಕೆ ಸ್ವರ್ಗದೊಡನೆ ಸಂಬಂಧವನ್ನು ತಪ್ಪುವಂತೆ ಮಾಳಿಗೆಯ ವರೆಗೆ ಜೇಡಬಲೆ ಹಬ್ಬಿಕೊಂಡಿವೆ. ಎದುರಿನ ಗೋಡೆಗೆ ಅರ್ಥವಾಗದಂತಹ ಕೆಲವು ಚಿತ್ರಗಳು ಅಂಟಿಕೊಂಡಿವೆ. ಕೋಣೆಯ ಮಧ್ಯದಲ್ಲಿ ಒಂದು ಸಣ್ಣ ಮೇಜು. ಅದರ ಮೇಲೆ ಎರಡು ಕಪ್-ಸಾಸರುಗಳಿವೆ. ಚಹದೊಂದು ದೊಡ್ಡ ಪಾತ್ರೆಯೂ ಇದೆ. ಮೇಜಿನ ಎರಡು ಬದಿಗೆ—ಪ್ರೇಕ್ಷಕರನ್ನು ಎದುರಿಸಿ—ಎರಡು ಕುರ್ಚಿಗಳಿವೆ. (ಪ್ರೇಕ್ಷಕರ) ಎಡಬದಿಯ ಕುರ್ಚಿಯಲ್ಲಿ **ನಾಟಕಕಾರ** ಮತ್ತೊಂದರಲ್ಲಿ **ವಾಹವ್ವಾಕಾರ** ಕೂತಿದ್ದಾರೆ. ನಾಟಕಕಾರನು ತೆರೆ ಏಳುವಾಗ ತನ್ನ ಕಪ್ಪನ್ನು ತುಂಬಿಕೊಳ್ಳುತ್ತಿದ್ದಾನೆ.]

**ವಾಹವ್ವಾಕಾರ** :— (ಆವೇಶಭರಿತ ಧ್ವನಿಯಲ್ಲಿ ತರ್ಜನಿಯನ್ನು ತೋರಿಸುತ್ತ) ಇದು ನಿನಗೆ ಶೋಭಿಸುವುದಿಲ್ಲ ಎಂದೆ. (ಹತ್ತಿರ ಬಂದು) ನಿಜವಾಗಿ ಹೇಳು.... ನಿನಗೆ ಏನೂ ಅನ್ನಿಸುವುದಿಲ್ಲವೆ?.... ಲಕ್ಷಾವಧಿ ದೇಶಬಾಂಧವರು ಮರಣಕ್ಕೆ ಗುರಿಯಾಗುತ್ತಿರುವಾಗ—

**ನಾಟಕಕಾರ**:— (ನಡುವೆಯೆ) ಅದರಂತೆಯೆ ಕೋಟಿಗಟ್ಟಲೆ **ಜಗದ್ಬಾಂಧವರು** ಮರಣಕ್ಕೆ ಗುರಿಯಾಗುತ್ತಿದ್ದಾರೆ—

**ವಾಹವ್ವಾಕಾರ**:— (ಅಸಹನೆಯಿಂದ, ತಿರಸ್ಕಾರದಿಂದ) ಮಾತಿಗೆ ಮಾತು ಕೂಡಿಸುವ ನಿನ್ನ ನಾಟ್ಯಕಲೆಯ ಜಾಣತನದ ಪ್ರದರ್ಶನ ಇಲ್ಲಿ ಬೇಡ.... 'ಕೋಟಿಗಟ್ಟಲೆ ಜಗದ್ಬಾಂಧವರು' ಎಂತೆ! ಅವರು ಸಾಯುವುದು ತಮ್ಮ ತಪ್ಪಿಗಾಗಿ, ಯುದ್ಧ ಹೂಡಿದ್ದಕ್ಕಾಗಿ—

**ನಾಟಕಕಾರ**:— (ಚಹವನ್ನು ಕುಡಿದು ಕಪ್ಪನ್ನು ಕೆಳಗಿಡುತ್ತ) ಇವರು ಸಾಯು ವುದೂ ತಮ್ಮ ತಪ್ಪಿಗಾಗಿ, ಹುಟ್ಟಿಬಂದ ಮೂರ್ಖತನಕ್ಕಾಗಿ—

**ವಾಹವ್ವಾಕಾರ**:— (ರಭಸದಿಂದ ಓಡಿಬಂದು ಅವನ ಎರಡೂ ಭುಜಗಳನ್ನೇ ಗಟ್ಟಿಯಾಗಿ ಹಿಡಿದು ಅಲುಗಿಸುತ್ತ) ಎಲೊ! ಎಲೊ! ನೀನು ನಿಜವಾಗಿಯು ಇಷ್ಟು ಕಠೋರನಾಗಿರುವಿಯಾ? ಇಲ್ಲ–ಇಲ್ಲ–ನಾನು ನಂಬಲಾರೆ! (ದೂರ ಸರಿದು ಸಮಾಧಾನದ ದನಿಯಲ್ಲಿ) ನಾನು—ನಂಬಲಾರೆ! ನೀನು ನಾಟಕಗಳನ್ನು ಬರೆಯಲು ಪ್ರಾರಂಭಿಸಿದಿಂದ ಇಂದಿನ ವರೆಗೆ ನಿನ್ನನ್ನು ನೋಡುತ್ತ ಬಂದಿರುವೆ. ಒಂದೊಂದು ನಾಟಕಕ್ಕೆ, ಪ್ರತಿಯೊಂದು ಪಾತ್ರಕ್ಕೆ, ಪ್ರತಿಯೊಂದು ನಿನ್ನ ವಾಕ್ಯಕ್ಕೆ 'ವಾಹವ್ವಾ!' ಎಂದಿದ್ದೇನೆ, 'ಭಲಾ' ಎಂದಿದ್ದೇನೆ! ಸಮಾಜದ ಅನ್ಯಾಯವನ್ನು, ಅನಾಥರ–ಅಬಲೆಯರ ಆರ್ತ–ನಿನಾದವನ್ನು, ಬಡವರ ಬವಣೆಯನ್ನು ಚಿತ್ರಿಸುವ **ನೀನು** ಕಠೋರ ಎನ್ನುವುದಾದರೂ ಹೇಗೆ? (ಉಸುರ್ಗರೆದು) ಆದರೂ ಈಗ ನೀನು ಬೇರೆಯಾಗಿರುವೆ. ಕೂಳಿಲ್ಲದೆ, ಆಸರವಿಲ್ಲದೆ ಬೀದಿಯ ಕಸಕ್ಕೆ ಬಿದ್ದು ನಾಯಿಗಳಂತೆ ನಮ್ಮವರು ಸಾಯುವಾಗ ನಿನಗೆ ಒಂದೂ ಕಳಕಳಿಯ ವಿಚಾರವಿಲ್ಲವೆ?

**ನಾಟಕಕಾರ**:— (ಎದ್ದು, ನಡೆದು ಬಂದು, ಕನಿಸುವವನಂತೆ ಅವನ ಬೆನ್ನಿನ ಮೇಲೆ ಕಯ್ಯಾಡಿಸುತ್ತ) ನೀನನ್ನುವುದೇನು? ಇಂದಿನ ಬರಗಾಲಕ್ಕಾಗಿ ನಾನು ನಾಟಕವನ್ನು ಬರೆಯಬೇಕು ಎಂದು—

**ವಾಹವ್ವಾಕಾರ**:— (ಬೆದರಿದ ಪಶುವಿನಂತೆ ತಟ್ಟನೆ ಇದಿರಿಸಿ ನಿಂತು) ಬರೆಯಬೇಕು! (ದನಿಯನ್ನು ಎತ್ತರಿಸಿ) ಅಲ್ಲ, ಈಗಾಗಲೇ ನೀನು ಬರೆಯಬೇಕಿತ್ತು.... ಈಗ ನೀನು ಬರೆದರೂ ನನಗೆ ಅಷ್ಟೊಂದು ಸಮಾಧಾನವಿಲ್ಲ.

**ನಾಟಕಕಾರ**:— ಈಗಲೂ ನಾನು ಬರೆಯುವುದಿಲ್ಲ. ಈಗ ಎಷ್ಟೊಂದು ಸಮಾಧಾನ ನಿನಗೆ?

**ವಾಹವ್ವಾಕಾರ**:— (ಸಿಡಿದು ನಿಂತು) ಏನಂದೆ? ಈಗಲೂ ಬರೆಯುವುದಿಲ್ಲ ಈಗಲೂ—

**ನಾಟಕಕಾರ** :— (ಕಾಲನ್ನು ಅಪ್ಪಳಿಸಿ) ಈಗಲೂ ಬರೆಯುವುದಿಲ್ಲ—ಎಂದೆ! ಜನರು ಸಾಯುವರಂತೆ, ಆದಕಾಗಿ ನಾನು ನಾಟಕ ಬರೆಯಬೇಕಂತೆ. ನಾಟಕವೆಂದರೆ ಚಿತ್ರಗುಪ್ತರ ಡೈರಿ ಆಗಿದೆ ಇವನಿಗೆ! (ಬೆನ್ನಿಗೆ ಕೈಕಟ್ಟಿ ಕೊಂಡು ಅವನಿಂದ ಬೇರೆ ಕಡೆ, ಮೆಲ್ಲಗೆ, ನಡೆಯುವನು.)

**ನಾಹವ್ವಾಕಾರ** :— (ಅತ್ಯಂತ ತಿರಸ್ಕಾರದಿಂದ, ಬೆನ್ನನ್ನು ಭೇದಿಸಿ ಇದಿರುಗಟ್ಟಿ ನಿಲ್ಲುವಂತಹ ದೃಷ್ಟಿಯಿಂದ ಅವನನ್ನು ನೋಡುತ್ತ) ಓಹೋ! ಸಾಯುವ ಜನರ ಸಂಬಂಧ ನಿನ್ನ ನಾಟಕಕ್ಕೆ ಇಲ್ಲ, ಅಲ್ಲವೆ? ಆಶಾವಾದಿ ನೀನು! ಕ್ರಾಂತಿಕಾರ ನೀನು! ಹಾಸ್ಯರಸ ಸಾರ್ವಭೌಮ ನೀನು! 'ತರುಣಿಯರ ಕಂಕುಳೊಳು ಕೈಯಿಕ್ಕಿ ನಗಿಸುವು'ದೆ ನಿನ್ನ ನಾಟ್ಯಕಲೆ ಅಲ್ಲವೆ?

**ನಾಟಕಕಾರ** :—(ಸಿಟ್ಟಿನಿಂದ ಅಣಕಿಸುತ್ತ) ಇಲ್ಲ—'ಹೆಣಗಳನು ಸಿದಿಗೆಯೊಳು ಕೂರಿಕ್ಕಿ ಹುಗಿಸುವ' ನಾಟಕಗಳನ್ನು ಬರೆಯುವೆ!....(ಹತ್ತಿರ ನಡೆದು ಬರುತ್ತ) ಅಲ್ಲೋ—ಮೂರ್ಖಾ—ನಾನು ನಾಟಕಗಳನ್ನು ಯಾಕೆ ಬರೆಯುವೆ, ಗೊತ್ತಿದೆಯೆ ನಿನಗೆ?

**ನಾಹವ್ವಾಕಾರ** :— (ತಿರಸ್ಕಾರದಿಂದ) ಪರರನ್ನು ವಂಚಿಸುವುದಕ್ಕಾಗಿ!

**ನಾಟಕಕಾರ** :—(ತಿಳುಹಿಸಿ ಹೇಳುವವನಂತೆ ಗಟ್ಟಿಯಾಗಿ) ಇಲ್ಲ, ಆತ್ಮನನ್ನು ರಂಜಿಸುವುದಕ್ಕಾಗಿ. (ಅವನ ಹೆಗಲ ಮೇಲೆ ಕೈಯಿಟ್ಟು) ಜಗತ್ತನ್ನು ನೋಡಿ ಬರೆದ ನಾಟಕಗಳನ್ನು ಜಗತ್ತು ನೋಡುವುದೆ ಇಲ್ಲ! (ಒಮ್ಮೆಲೆ ನಕ್ಕು) ಹೋಗಲಿ ಬಿಡೊ! ನಿನ್ನದಾದರೂ ಇಷ್ಟೇಕೆ ಹಟ? ಹಿಂದೆ ನಮ್ಮ ದೇಶದಲ್ಲಿ ಬರಗಾಲ ಎಂದೂ ಇದ್ದಿರಲಿಲ್ಲ ಎನ್ನುವೆಯಾ? ಆದರೂ ನೋಡು; ನಿಮ್ಮ ವ್ಯಾಸ-ವಾಲ್ಮೀಕಿಯರನ್ನು ಮೊದಲ್ಮಾಡಿ—ಪಂಪ-ರನ್ನರೂ ಅವರೊಳಗೇ ಜೋಡಿ—ಇಂದಿನ ವರೆಗೆ ಯಾವ ಸಾಹಿತಿ ಬರಗಾಲದ ಸಲುವಾಗಿ ಬರೆದಿದ್ದಾನೆ? ಅವರನ್ನೆಲ್ಲಾ ಬಿಟ್ಟು ನನ್ನೊಬ್ಬನ ಮೇಲೆಯೆ ನಿನ್ನ ಹಟ ಯಾಕೆ, ನಿನ್ನ ಅಧಿಕಾರ ಯಾಕೆ, ನಿನ್ನ ಸಿಟ್ಟು ಯಾಕೆ?

**ನಾಹವ್ವಾಕಾರ** :—(ಮಾತನಾಡದೆ ನಡೆದು ತನ್ನ ಕುರ್ಚಿಯಲ್ಲಿ ಕುಳಿತು, ನಾಟಕಕಾರನನ್ನು ದಿಟ್ಟಿಸುತ್ತ) ನೀನು ಶುದ್ಧ ನಾಚಿಕೆಗೇಡಿ!

**ನಾಟಕಕಾರ** :—ಓಹೊ ! ಅದಕ್ಕೆ ನಾನು ಬರಗಾಲದ ನಾಟಕಾ ಬರೆಯಬೇಕು ಅಂತಲೊ ?

**ವ್ಯಾಖ್ಯಾನಕಾರ** :— ಬರೆಯುವವನಿಗೆ ಭಾವನಾಶಕ್ತಿ ಇಲ್ಲದಿದ್ದರೂ ಬುದ್ಧಿಶಕ್ತಿ ಇರುವುದು ಅಂತ ನಾನು ತಿಳಿದಿದ್ದೆ.

**ನಾಟಕಕಾರ** :— ಬುದ್ಧಿಶಕ್ತಿ ಇದೆ ನನಗೆ, ಅಂತಲೇ ಈ ಮಾತನ್ನು ಹೇಳತಾ ಇದ್ದೀನಿ ನಿನಗೆ. ( ನಡೆದು ತನ್ನ ಕುರ್ಚಿಯಲ್ಲಿ ಕುಳಿತು ಇನ್ನಿಷ್ಟು ಚಹವನ್ನು ತನ್ನ ಕಪ್ಪಿನೊಳಗೆ ಸುರುವುತ್ತ ) ಬರಗಾಲದ ಸಂಬಂಧ ಇದ್ದದ್ದು ಸಾಹಿತ್ಯಕ್ಕಲ್ಲ, ಸರಕಾರಕ್ಕೆ.... ಕೂಳಿಗೆ ಗತಿ ಇಲ್ಲದವರಿಂದ ತಾಜಮಹಲನ್ನೇ ಕಟ್ಟಿಸಬಹುದಲ್ಲದೆ, ನಾಟಕ–ಕತೆಗಳನ್ನು ಕಟ್ಟಿಸಲಾಗಲ್ಲ... ತಾಜಮಹಲನ್ನ ಕಟ್ಟಿಸೋದು ದೊರೆತನಕ್ಕೆ ಶಕ್ಯ, ಸರಕಾರಕ್ಕೆ ಶಕ್ಯ .. ಅಂ....ನಿನಗೆ ಇನ್ನಿಷ್ಟು ಚಹ ಬೇಕೇನು ?

**ವ್ಯಾಖ್ಯಾನಕಾರ** :— ( ಹೇಸಿಕೆಯನ್ನು ನಟಿಸಿ ) ದೇಶದ ಇಂತಹ ಪರಿಸ್ಥಿತಿಯೊಳಗೆ ಇಷ್ಟು ನೀನು ಚಹ ಕುಡಿಯೋದಂದರೆ—

**ನಾಟಕಕಾರ** :— ( ನಡುವೆಯೆ ) ಅದಕ್ಕೊಂದು ಕಾರಣ ಇದೆ. ನಾನು ನಿನಗೆ ಹೇಳಿರುವೆನೊ ಇಲ್ಲವೊ ? ಸಣ್ಣವನಿದ್ದಾಗ ನಾನೊಂದು ಒತ್ತ-ಕರಡದ ಸುರಳಿಯನ್ನು ನುಂಗಿದೆ, ನಾನು ಬೆಳೆದ ಹಾಗೆ ಒಳಗೆ ಆ ಒತ್ತಕರಡೂ ಬೆಳೆದಿರಲಿಕ್ಕೇ ಬೇಕು. ಈಗ ನಾನು ಎಷ್ಟು ಚಹ ಕುಡಿದರೂ—

**ವ್ಯಾಖ್ಯಾನಕಾರ** :— ( ಆಕಾಶದ ಕಡೆ ನೋಡುತ್ತ ) ಸಾಹಿತ್ಯ ! ಸುತ್ತುಮುತ್ತಲಿನ ಸತ್ಯ ! ಕವಿ ! ಭಾವನಾಜೀವಿ ! (ತಿರಸ್ಕಾರದಿಂದ ಉಸಿರೆಳೆದು ಕುರ್ಚಿಯಿಂದೇಳುತ್ತ ) ಠಕ್ಕು ! ಇದೆಲ್ಲ ಬರೆಹಗಾರರ ಬರಿಯ ಸೊಕ್ಕು !

**ನಾಟಕಕಾರ** :— ( ನೊಂದವನಂತೆ ) ಹಾಂ ! ಎಚ್ಚರ ! 'ಸೊಕ್ಕು' ಅನ್ನು.... ಆದರೆ 'ಠಕ್ಕು' ಎನಬೇಡ ! ಸಾಹಿತ್ಯಕ್ಕೆ ಠಕ್ಕು ಎಂದರೆ ಎಚ್ಚರಿಕೆ !

**ವ್ಯಾಖ್ಯಾನಕಾರ** :— ( ಕಿವಿಗಳನ್ನು ಕೈಗಳಿಂದ ಮುಚ್ಚುತ್ತ ) ಠಕ್ಕು ! ಠಕ್ಕು ! ಠಕ್ಕು !

**ನಾಟಕಕಾರ** :— ( ಎದ್ದು ಬಂದು ಅವನ ಕೈ ಹಿಡಿದು ತಡೆದು ) ಮಿಕ್ಕವರು ಬರಗಾಲದಿಂದ ಸಾಯುವಾಗ ನಾನು ಚಹ ಕುಡಿದರೆ ನನ್ನ ಸಾಹಿತ್ಯ ಠಕ್ಕು ಯಾಕೆ ? ಯಾಕೆ ? ಠಕ್ಕು ಯಾಕೆ— ಹೇಳು ಎಂದೆ!

**ನಾಹವ್ನಾಕಾರ :** — ( ಕೈಕೊಸರಿಕೊಂಡು ) ಯಾಕೆ? ಯಾಕೆ ಎಂದರೆ— ಸಾಯುವವರಿಗಾಗಿ ಒಂದುಸಿರು ಕನಿಕರ ನಿಮ್ಮಲ್ಲಿಲ್ಲ, ಅದಕ್ಕೆ ನಿಮ್ಮ ಸಹೃದಯತೆಯ ಸೋಗು ಠಕ್ಕು!

**ನಾಟಕಕಾರ :**— ( ಒಮ್ಮೆಲೆ ) ಜಗತ್ತಿನ ಜನಸಂಖ್ಯೆ ಎಷ್ಟು ?

**ನಾಹವ್ನಾಕಾರ :** — ( ಸಂದರ್ಭ ತಿಳಿಯದೆ ) ಏನೆಂದೆ ?

**ನಾಟಕಕಾರ :**— ಜಗತ್ತಿನ ಜನಸಂಖ್ಯೆ ಎಷ್ಟು? ಅದರಲ್ಲಿ ಈಗ ಬರಗಾಲ ದಿಂದ ಸಾಯುವವರು ಎಷ್ಟು? ಹುಚ್ಚಾ, ರಾವಣನ ಕೈ ಬೆರಳುಗಳ ಮೇಲೆ ಎಣಿಸುವಷ್ಟಾಗಲಿಕ್ಕಿಲ್ಲ ಈ ಸಾಯುವ ಜನರ ಸಂಖ್ಯೆ! ನಾನು ಬರೆಯುವುದು ಬಹು ಜನರಿಗಾಗಿ, ನನ್ನ ಕನಿಕರ ಇದ್ದವರಿಗಾಗಿ. ಸತ್ತವರು ಸತ್ತರು, ಹಾಳು ಜಗತ್ತನ್ನು ಗೆದ್ದರು.. ಸಾಯುವುದು ಯಾಕೆ? ಇದ್ದುದಕ್ಕೆ, ಅದಕಾಗಿ ಇರವೇ ಸಾವಿಗೆ ಕಾರಣ; ಯುದ್ಧವೂ ಅಲ್ಲ, ಬರಗಾಲವೂ ಅಲ್ಲ. ಆದ್ದರಿಂದ ಇರವಿನ— ( ಒಮ್ಮೆಲೆ ) ಹಂ! ... ಇದೆಂತಹ ಮೋಜಿನ ವಿಚಾರ!.... ಸೊಗಸಾದ ವಿಚಾರ !.... ನಾಟಕಕ್ಕೆ ಒಳ್ಳೇ ರಂಜಕವಾದ ಸಂನಿವೇಶ.... ತಡೆ—ಈ ವಿಚಾರವನ್ನೆ ನಾಟಕದಲ್ಲಿ ಹಾಕುವೆ... (ಎನ್ನುತ್ತ ಇತ್ತಿಂದತ್ತ ಅತ್ತಿಂದತ್ತ ಸಿಳ್ಳು ಹಾಕುತ್ತ 'ತನನನನ' ಎಂದು ರಾಗ ಎಳೆಯುತ್ತ ಸುತ್ತಾಡುವನು. )

**ನಾಹವ್ನಾಕಾರ :**— (ಒಂದೆರಡು ನಿಮಿಷ ಚಕಿತನಂತೆ ಅವನನ್ನು ನೋಡಿ) ಏ— ಏನೊ ಇದು ?

**ನಾಟಕಕಾರ :**— ( ಸಿಳ್ಳು – ತನನನಗಳ ನಡುವೆ ಆಗಾಗ ಮಾತನಾಡುತ್ತ ) ನಾಟಕ—

**ನಾಹವ್ನಾಕಾರ :**— ನಾಟಕ ? ಅದಕ್ಕೆ ಸುತ್ತಾಡುವೆ ಯಾಕೆ ? ಕುರ್ಚಿಗೆ ಕೂತು ಬರೆಯಲ್ಲ ?

**ನಾಟಕಕಾರ :**— ( ಮೇಲಿನಂತೆ ) ಬರೆಯೋದು....ಬರೆಯೋದು ಈಗ ಶಕ್ಯ ಇಲ್ಲ....ಬರೆಯೋದು ರಾತ್ರಿಕಾಲದೊಳಗೆಯೆ....

**ನಾಹವ್ನಾಕಾರ :** — ( ಆಶ್ಚರ್ಯದಿಂದ ) ಬರೆಯೋದು ರಾತ್ರಿ ಅಂದ ಮೇಲೆ ಈಗ ಯಾಕೆ ಮಶಿ ತೀರಿದ ಪೆನ್ನಿನ ಹಾಗೆ ಅತ್ತಿತ್ತ ವ್ಯೆ ಜಾಡಿಸಿ ಕೊಳ್ಳುವೆಯೊ ?

**ನಾಟಕಕಾರ** :— ( ಇನ್ನೂ ಮೇಲಿನಂತೆಯೆ ) ವಿಚಾರ ಬಂದದ್ದು ಈಗ.... ಬರೆಯೋದು ರಾತ್ರಿಯೊಳಗ....ರಾತ್ರಿತನಕ ಬಂದ ವಿಚಾರ ಉಳಿಯ ಬೇಕಲ್ಲ?....ಅದಕ್ಕೆ ಮರೆಯಬಾರದು ಅಂತ ಅಲ್ಲಿಯತನಕ ಹೀಗೆ ( ಸಿಳ್ಳು-ತನನನಗಳು ತುಸು ಜೋರಾಗುವುವು ).

[ ನಾಟಕಕಾರನು ಸುತ್ತಾಡುತ್ತಲೆ ಬಂದು ತನ್ನ ಕುರ್ಚಿಯಲ್ಲಿ ಕುಳಿತು, ಕಾಲ್ಗಳನ್ನು ಮೇಜಿನ ಮೇಲೊಗೆದು, ಮುಖವನ್ನು ಮೇಲಕ್ಕೆತ್ತಿ, ಸಿಳ್ಳು-ತನನನಗಳನ್ನು ಸಾಗಿಸುವನು. ವಾಹವ್ಯಾಕಾರನು ಮೇಜಿನಿಂದ ಅವನನ್ನು ನೋಡುತ್ತ ನಿಲ್ಲುವನು. ಇಷ್ಟರಲ್ಲಿ ಹೊರಗಿನಿಂದ ‘ ಅಪಾ, ಸಾಯ್ತೀನರಿ, ಹಸಿದು ಸಾಯ್ತೀನ್ರಿ ’ ಎಂಬ ಕನಿಕರವನ್ನು ಹುಟ್ಟಿಸುವ ದನಿ—. ಅದನ್ನು ಕೇಳಿ— ]

**ವಾಹವ್ಯಾಕಾರ** :— ( ಬಾಗಿಲಿಗೆ ಧಾವಿಸಿ ) ಏನು ? ಯಾರದು ? ( ಹೊರಗೆ ಹಣಿಕಿಕ್ಕಿ ನೋಡಿ ) ಅಯ್ಯಯ್ಯೊ ! ದೇವರೆ ಗತಿ ! ( ಎಂದು ಕೈಗಳಿಂದ ಕಣ್ಣು ಮುಚ್ಚಿಕೊಂಡು ಒಳಗೆ ನೋಡುವನು )

[ ಮತ್ತೆ ಹೊರಗೆ ‘ ಹೊಟ್ಟೆಗೆ ಒಂದು ತುತ್ತು ನೀಡಿರಿ’ ಎಂದು ದನಿ ]

**ವಾಹವ್ಯಾಕಾರ** :— (ಮೆಲ್ಲನೆ ನಾಟಕಕಾರನ ಹತ್ತರ ಬಂದು) ಒಂದು ನಿಮಿಷ ನೋಡು ಈ ದೃಶ್ಯ.

**ನಾಟಕಕಾರ** :— ( ಮುಖವನ್ನು ತಿರುಗಿಸದೆ, ಲಕ್ಷವಿಲ್ಲದೆ, ತನ್ನಷ್ಟಕ್ಕೆ ತಾನೆ ಎಂಬಂತೆ ) ಇನ್ನೂ ಪೂರ್ತಿ ತಯಾರಾಗಿಲ್ಲ ದೃಶ್ಯ.... (ಸಿಳ್ಳು).. ದೃಶ್ಯ ಒಂದು— ಉ-ಊ-ಹಂ !.... (‘ತನನನ’)

**ವಾಹವ್ಯಾಕಾರ** :— ( ತಡೆಯದೆ ) ಅದಲ್ಲ.... ಹೊರಗೆ ಸಾಯುತಾ ಇದೆ ಒಂದು ಜೀವ ! ಆ ದೃಶ್ಯ ನೋಡು ಅಂದೆ !

**ನಾಟಕಕಾರ** :— ( ಇನ್ನೂ ಲಕ್ಷವಿಲ್ಲದೆ ಮೇಲಿನಂತೆ ) ಮುಗಿದಿಲ್ಲ— ಇನ್ನೂ ದೃಶ್ಯ ಮುಗಿದಿಲ್ಲ ಅಂತ ಹೇಳಲಿಲ್ಲವೆ ? ನೋಡು—( ಏಳುತ್ತ ) ನಿನಗೆ ಒಳಗೆ ಏನಾದ್ರೂ ಹೃದಯ ಅಥವಾ ಕಣ್ಣು ಇದ್ದರೆ ಅದನ್ನ ಅರಳಿಸಿ ನೋಡು... (ಅತ್ತಿತ್ತ ತಿರುಗಾಡುತ್ತ ಸಿಳ್ಳು. ಒಮ್ಮೆಲೆ ಒಂದೆಡೆ ನಿಂತು ಇದಿರು ದೂರ ದೃಷ್ಟಿಯಿಂದ ತೋರಿಸುತ್ತ ) ಇಲ್ಲಿ ನೋಡು ! ರಂಗ ಭೂಮಿಯಲ್ಲಿ ಕ್ರಾಂತಿಯನ್ನೆಬ್ಬಿಸುವಂತಹ ದೃಶ್ಯ ಈಗ ನಾನು ದೃಷ್ಟಿ ಸುತಾ ಇದ್ದೀನಿ.... ವಿಶಾಲ —ಅತ್ಯಂತ ವಿಶಾಲವಾದ ರಂಗಭೂಮಿ....

ಹಿಂದೆ ಒಂದು ತೆರೆ....ಅದರ ಮೇಲೆ ಯಾವುದೂ ಚಿತ್ರ ಇಲ್ಲ—ಕರಿ ಬಿಳಿ ಬಣ್ಣಗಳಿಂದ ದೂರ–ದೂರ-ದೂರ ಅನ್ನೋ ಹಾಗೆ ವಿಶ್ವಾತೀತ ವೈಶಾಲ್ಯವನ್ನು ಸೂಚಿಸುವ್ದು ಆ ತೆರೆ.... ಆ ತೆರೆಯ ಮುಂದೆ, ರಂಗ ಸ್ಥಲದ ಮೇಲೆ ಅನ್ನದ ಬೆಂಕಿ....ಅದರ ಸುತ್ತಲೂ ಮಾನವಪತಂಗ!

[ಮತ್ತೆ ಹೊರಗೆ:- 'ಕೊಳಿಲ್ಲಿ ಸಾಯ್ತೀವ್ರಿ, ಬೇಡಲಾರ ಪಸಿ ಇದ್ರಿ, ಒಂದು ತುತ್ತು ನೀಡಿರಿ" ಎಂಬ ದನಿ.]

**ಸಾಹಿತ್ಯಕಾರ :—** (ತಳಮಳಗೊಂಡು, ನಿದ್ದೆ ಹೋದವರನ್ನು ಎಚ್ಚರಿಸುವಂತೆ ನಾಟಕಕಾರನನ್ನು ಗಟ್ಟಿಯಾಗಿ ಅಲುಗಿಸುತ್ತ) ಏ, ವಿಪರೀತ ಬುದ್ಧಿಯ ವಿದ್ಯಾವಂತ ಕೋತೀ! ಇಲ್ಲಿ ನಿನ್ನ ಮನೆಯ ಮುಂದೆ ಒಂದು ಜೀವ ಸಾಯ್ತಾ ಇದೆ—

**ನಾಟಕಕಾರ :—** (ರಭಸದಿಂದ ಕೊಸರಿಕೊಂಡು) ಹಾಳಾಗಿ ಹೋಯ್ತು ನಿನ್ನ ಒಂದು ಜೀವ!.... ಇಲ್ಲಿ ಇಡಿಯ ಜೀವಕೋಟಿಯೆ ಅನ್ನದ ಬೆಂಕಿಯೊಳಗೆ ಹಾರಿ ಸುಟ್ಟು ಹಪ್ಪಳ ಆಗ್ತಾ ಇದೆ!...ನೋಡು—ನೋಡು!.... ಅನ್ನವನ್ನು ಸುಟ್ಟು ತಿನ್ನುವ ತಾನು ಶ್ರೇಷ್ಠ ಎಂಬ ಹೆಮ್ಮೆಯ ಮಾನವನನ್ನು ಈಗ ಅನ್ನವೇ ಸುಟ್ಟು ಸೇಡು ತೀರಿಸುತ್ತಿದೆ, ನೋಡು!.... ನೋಡಿದಿಯಾ?.... ದೂರದ ಹಕ್ಕಿ ಗಿಡದ ತುದಿಹಣ್ಣನ್ನು ತಿನ್ನುತ್ತಾ ಈ ಮಾನವನ ಆತ್ಮಯಜ್ಞಕ್ಕೆ ಮಂತ್ರ ಹೇಳುವಂತೆ ಹಾಡುತ್ತಿದೆ ನೋಡು!....ಆ ಮಿಕಗಳ ಹಿಂಡನ್ನು ನೋಡಿದಿಯಾ?....ಇಂದು ತನಗೆ ಬೇಕಾದಷ್ಟನ್ನು ಮಾತ್ರ ತಿಂದರೆ ನಾಳೆಗಾಗಿ ಭೂಮಾತೆಯೆ ಅನ್ನವನ್ನು ಕೊಡುವಳೆಂದು ಉಪದೇಶ ಕೊಡುವಂತೆ ಹೇಗೆ ಹಚ್ಚನ್ನ ಹೊಲದಿಂದ ಹೊಟ್ಟೆತುಂಬಿಕೊಂಡು ಹೊರಟಿವೆ! ನೋಡು! ನೆಟ್ಟಗೆ ನೋಡು, ಕಣ್ದೆರೆದು ನೋಡು! ಸೂರ್ಯನು ಬೆಳಕನ್ನು ಕೊಟ್ಟನೆಂದು ಆ ಸೂರ್ಯನಿಗೆ ಹಣ್ಣುಗಳನ್ನರ್ಪಿಸಲು ಬಾಗಿ ನಿಂತ ಗಿಡಗಳನ್ನೇ ನೋಡು!.... (ತಲೆದೂಗುತ್ತ) 'ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ' — ಎಂಬ ಶ್ರೀಕೃಷ್ಣನ ಮಾತಿನಂತೆ ಭಾವಗರ್ಭಿತವಾಗಿ ನಿಂತಿವೆ!....ಹಕ್ಕಿ ಹಾರಾಡುತ್ತಿವೆ, ಮೃಗ ಮೆರೆದಾಡುತ್ತಿವೆ, ಗಿಡಬಳ್ಳಿ ಫಲಭರಿತವಾಗಿವೆ,

ಭೂಮಿತಾಯಿ ಬೆಳೆಯಿಂದ ಬಳುಕುತ್ತಿದ್ದಾಳೆ! ಈ ಆನಂದಮಯ ಸೃಷ್ಟಿಯಲ್ಲಿ ಮಾನವ ಹುಳು ಒಂದೇ ಒದ್ದಾಡುತ್ತಿದೆ, ಬೆಂಕಿಯಲ್ಲಿ ಹಾರುತ್ತಿದೆ!

[ಹೊರಗಿನಿಂದ:—'ಹೊಟ್ಟೆಯುರಿಗೆ ಬಿಕ್ಷೆ ಬೇಡ್ತೀನಿ, ಒಂದಗಳು ನೀಡ್ರಿ' ಎಂಬ ಆರ್ತ ದನಿ.]

**ಸಾಹವ್ಯಾಕಾರ:**— (ಒಮ್ಮೆ ಹೊರಗೆ, ಒಮ್ಮೆ ಒಳಗೆ ನಾಟಕಕಾರನನ್ನು ಅನೇಕ ಸಲ ಮಾತಿಲ್ಲದೆ ಮಿಕಿ ಮಿಕಿ ನೋಡುತ್ತ) ಮಾನವ ಪತಂಗ! ಮಾನವ ಹುಳು?.... ಹಾಗಿದ್ದರೆ ನೀನು ಕ್ರಾಂತಿಕಾರನಲ್ಲ, ಭ್ರಾಂತಿಕಾರ.... ಕರುಳಿಲ್ಲ ನಿನಗೆ, ಕಲ್ಪನೆ ಮಾತ್ರ ಇದೆ! ಕಣ್ಣೆದುರು ಸಾಯುವ ಜೀವವನ್ನು ಉಳಿಸಲು ಯತ್ನಿಸದೆ, ಕಾಣದ ಜೀವಗಳ ರಾಶಿರಾಶಿ ಹೆಣಗಳನ್ನು ಕಲ್ಪಿಸಿಕೊಂಡು ಮನಸ್ಸನ್ನು ರಂಜಿಸಿಕೊಳ್ಳುತ್ತಿರುವೆ ನೀ!.... (ಒಮ್ಮೆಲೆ ನಿರ್ಧಾರದ ದನಿಯಲ್ಲಿ) ಅಹುದು! ಅಹುದು! ಸಾಹಿತ್ಯ ಎಂಬುದು ಶುದ್ಧ ಠಕ್ಕು!

[ಹೊರಗೆ ನೆರಳುವ ದನಿ, ಹಂಬಲಿಸುವ ದನಿ.]

**ನಾಟಕಕಾರ:**— (ಅದನ್ನು ಕೇಳಿ, ಸಾಹವ್ಯಾಕಾರನನ್ನು ಬಾಗಿಲವರೆಗೆ ಎಳೆತಂದು) ನೋಡು ... ಕಣ್ಣೆದುರು ಸಾಯುವ ಜೀವವನ್ನು ನೋಡಬೇಕೆಂಬ ನಿನ್ನ ಕುತೂಹಲ ಕಣ್ಣು ತುಂಬಿ ಆನಂದಾಶ್ರು ಧಾರೆಯಾಗಿ ಹರಿಯುವವರೆಗೆ ನೋಡು.... (ಅವನನ್ನು ಅಲ್ಲಿಯೆ ಬಿಟ್ಟು ರಂಗಸ್ಥಲದ ಮಧ್ಯಕ್ಕೆ ನಡೆದು ಬರುತ್ತ) ಸಾಹಿತ್ಯ ಠಕ್ಕು, ನಾನೂ ಠಕ್ಕ .. ಅದಕಾಗಿ ಸಾಯುವವರನ್ನು ಕಣ್ಣಾರೆ ನೋಡಲಾರೆ.... (ಅವನನ್ನು ಎದುರಿಸಿ ಗಟ್ಟಿಯಾಗಿ) **ಕಣ್ಣಾರೆ ನೋಡುವುದಿಲ್ಲ** ಎಂದೆ!

**ಸಾಹವ್ಯಾಕಾರ:**— ನೋಡುವುದು ಹಾಳಾಗಲಿ, ಅವನಿಗೊಂದು ತುತ್ತನ್ನು ನೀಡುವುದು—

**ನಾಟಕಕಾರ:**— (ಗಟ್ಟಿಯಾಗಿಯೆ) ನೀಡುವುದೂ ಇಲ್ಲ.... ಈ ಕೈ ಬರೆಯುವುದಕ್ಕೆ.

**ಸಾಹವ್ಯಾಕಾರ:**— ಇಂತಹ ಪ್ರಸಂಗದಲ್ಲಿ ಬರೆಯುವುದೆಂದರೆ ಕೂಳಿಲ್ಲದ ಜನತೆಯ ಹೊಟ್ಟೆಗೆ ಬರೆ ಕೊಟ್ಟಂತೆ.

**ನಾಟಕಕಾರ:—** ಜನತೆಗೂ ನನಗೂ ಸಂಬಂಧವಿಲ್ಲ ಎಂದು ಹೇಳಲಿಲ್ಲವೆ? ... ಸಾಕು.... ಈ ನನ್ನ ಹೊಸ ನಾಟಕದ ರಚನೆ ನಡೆದಿದೆ, ನಡುವೆ ಮಾತು ಬೇಡ. [ಹೊರಗಿನಿಂದ:—'ಯಾರಿದ್ದೀರಿ? ಒಂದು ತುತ್ತು—] (ರಭಸದಿಂದ ಬಾಗಿಲಿಗೆ ಬಂದು) ಏ—ಈಗ ನಡುವೆ ತೋರಿದರೆ ಕೊಟ್ಟೆ ಎಂದರೆ ಬಾಯ್ತುಂಬ ಮತಿ ಬರಕೇನು— ನಡೆ— (ಸಿಟ್ಟು ಏರುತ್ತ) ನಡೆ —ನ್—ಅಯ್ಯೋ—! (ಎಂದು ತಲೆ ಹಿಡಿದುಕೊಂಡು ಬೀಳುವಷ್ಟರಲ್ಲಿ ವಾಹವ್ವಾಕಾರನು ಧಾವಿಸಿ ಅವನನ್ನು ಹಿಡಿದು)

**ವಾಹವ್ವಾಕಾರ:—** (ಗಾಬರಿಯಿಂದ) ಏನಾಯ್ತು? ಏ—ಯಾರು? — ರಾಮೂ—

[ಒಳಗಿನಿಂದ ೨೦ ವರ್ಷದ ತರುಣನೊಬ್ಬನು ಬರುವನು]

**ತರುಣ:—** ಕೊನೆಗೆ ನಾನು ಹೇಳಿದಂತೇ ಆಯಿತು.

**ವಾಹವ್ವಾಕಾರ:—** (ತಿಳಿಯದೆ) ಏನು?

**ತರುಣ:—** ಬಂಗಾಲದ ಬರಗಾಲ ಕತೆ ಕೇಳಿದಂದಿನಿಂದ ಇವನು ಊಟ ಬಿಟ್ಟಿದ್ದ.... ನಾನು ಹೇಳಿದೆ—ಅದು ತಡೆಯುದು ಅಂತ—

**ವಾಹವ್ವಾಕಾರ:—** (ಒಮ್ಮೆಲೆ ತರುಣನನ್ನು ದಿಟ್ಟಿಸಿ ನೋಡುತ್ತ) ಏನು? ... ಯಾರು?.... ನೀನು ರಾಮೂ ಅಲ್ಲ—! ಯಾರು ನೀನು?

**ತರುಣ:—** (ನಾಟಕಕಾರನನ್ನು ತೋರಿಸಿ) ನಾನು ಅವನ ಹೃದಯ.

[ವಾಹವ್ವಾಕಾರನು ತಲೆ ಹಿಡಿದುಕೊಂಡು ಕಣ್ಣು ಮುಚ್ಚುವನು.
ಅವನ ಕಣ್ಣಿಗೆ ಕಟ್ಟಿದ ಕತ್ತಲೆ ಕ್ರಮೇಣ ರಂಗಸ್ಥಲವನ್ನೆಲ್ಲ
ತುಂಬಿಕೊಳ್ಳುವಾಗ—]

( ತೆರೆ. )

# ಭಾಗ್ಯದ ಬರಗಾಲ

( ಒಂದು ವ್ಯಂಗ್ಯ ದೃಶ್ಯ )

| ಪಾತ್ರಗಳು | ವಯಸ್ಸು | ನಟರು* |
|---|---|---|
| ಕಾರ್ಯದರ್ಶಿ .... | ೩೪ | .. ಶ್ರೀ. ನಾಡಿಗೇರ |
| ಅಧ್ಯಕ್ಷ .... | ೬೨ | .. ಶ್ರೀ. ನಾಡಿಗೇರ |
| ಹರಿಸರ್ವೋತ್ತಮಾಚಾರ್ಯ (ವೇಷ, ಉಟ್ಟ ಧೋತರ, ತಲೆಗೆ ಶಾಲು ಸುತ್ತಿದ್ದು, ಮೈಮೇಲೆ ಇನ್ನೊಂದು ಹೊತ್ತಿದ್ದು) | ೫೮ | ... ಶ್ರೀ. ಜೋಶಿ |
| ಸೂಕಪ್ಪಣ್ಣನವರು ... (ಗಾಂಧೀಪಂಥದ ವೇಷ) | ೪೭ | ... ಶ್ರೀ. ಜೋರಾಪುರ |
| ಯಾಕಪ್ಪಣ್ಣನವರು ... (ಬರಿತಲೆ, ಖಾದಿ ಪೈಜಾಮು, ಶರ್ಟಿನ ಮೇಲೆ ನೆಹರು ಜಾಕೆಟ್) | ೩೦ | ... ಶ್ರೀ. ಶಿವಣಗಿ |
| ನಾಟಕಕಾರ . (ಧೋತರ, ಕೋಟು, ಬರಿತಲೆ, ಕಂಠಕ್ಕೆ ಮಫ್ಲರ್) | ೩೮ | .. ಶ್ರೀ. ಹರಕಾರೆ |
| ಶ್ರೀಮತಿ ಲೋಕಮ್ಮ ... (ಆರು ವಾರದ ಸಾದಾ ಅಂದವಾದ ಸೀರೆ) | ೧೬ | .. ಕು. ಮಾಲತಿ ಕೊಣ್ಣೂರಮಠ |
| ಕಪಿ .... (ಕೂದಲಿನ ಬಕ್ಕತಲೆ, ಧೋತರ, ಶರ್ಟ್, ನೆಹರು ಜಾಕೆಟ್) | ೧೦ | .. ಶ್ರೀ. ಅಮಿನೂರ ಗುರುರಾಜ |
| ಮಹಾರಾಯ್ ಬಹಾದ್ದೂರ್ ಮೂಕಪ್ಪ (ಉದ್ದ ಕೋಟು, ಬೂಟು ಮುಟ್ಟುವ ಪ್ಯಾಂಟು, ಕೆಂಪುಜರಿಯ ರುಮಾಲು) | ೬೮ | ... ಶ್ರೀ. ಕುಲಕರ್ಣಿ |
| ವ್ಯಕ್ತಿ (ಹಳ್ಳಿಗ) ... | ೫೫ | .. ಶ್ರೀ. ಮುಳಗುಂದ |

* ಕರ್ನಾಟಕ ಕಾಲೇಜದ ಸಾಯನ್ಸ ಸಂಘದವರು ತಮ್ಮ ತಾ. ೬-೨-೧೯೬೬ ವಾರ್ಷಿಕೋತ್ಸವದಲ್ಲಿ ಮೊದಲ ಪ್ರಯೋಗವನ್ನು ಮಾಡಿದಾಗ ಪಾತ್ರವಹಿಸಿದವರು.

## ರಂಗಸೂಚಿಕೆ

[ಸಾರ್ವಜನಿಕ ಸಭೆಯ ದೃಶ್ಯ. (ಪ್ರೇಕ್ಷಕರ) ಎಡಬದಿಯ ಮೂಲೆಗೆ ಅಧ್ಯಕ್ಷರ ಕುರ್ಚಿ, ಮುಂದೆ ಮೇಜು, ಅದರ ಮೇಲೆ ತಕ್ಕ ಸಾಮಾನುಗಳು, ಅಧ್ಯಕ್ಷರ ಎಡಕ್ಕೆ ಹರಿಸರ್ವೋತ್ತಮಾಚಾರ್ಯ, ಕಾರ್ಯದರ್ಶಿ, ಮಹಾ-ರಾಯ್ ಬಹಾದ್ದೂರ್ ಮೂಕಪ್ಪ ಮತ್ತು ಯಾಕಪ್ಪಣ್ಣ; ಬಲಕ್ಕೆ ನಾಟಕ-ಕಾರ, ಶ್ರೀಮತಿ ತೂಕಮ್ಮ, ನೂಕಪ್ಪಣ್ಣ ಮತ್ತು ಕವಿ — ಹೀಗೆ ಕುರ್ಚಿಯಲ್ಲಿ ಕುಳಿತಿದ್ದಾರೆ. (ಪ್ರೇಕ್ಷಕರ) ಬಲಬದಿಯ ಹತ್ತಿರದ ಮೂಲೆಯಿಂದ ರಂಗಸ್ಥಲದ ಮಧ್ಯದವರೆಗೆ ಸಭೆಯ ಶ್ರೋತೃಗಳು. ಇನ್ನೂ ಅನೇಕರು ರಂಗಸ್ಥಲದ ಒಳಗಿನ ವರೆಗೂ ಕುಳಿತಿದ್ದಾರೆಂಬಂತೆ ಪ್ರಾರಂಭಕ್ಕೆ ರಂಗಸ್ಥಲದಲ್ಲಿ ಕುಳಿತ ಶ್ರೋತೃಗಳು ನಟನೆಯಿಂದ ಸೂಚಿಸಬೇಕು. ತೆರೆ ಎದ್ದಾಗ ಸಭಿಕರ ಗುಜುಗುಜು, ಕೂಡುವ ಏಳುವ ಸದ್ದು, ಕಾರ್ಯದರ್ಶಿ ಕಿರುಚುವ ವರೆಗೆ ನಡೆಯುವುದು. ಕಂಸದಲ್ಲಿ ಕಾಣಿಸಿದ ಚಪ್ಪಾಳೆ ಮೊದಲಾದದ್ದನ್ನು ಈ ಸಭಿಕರು ನಟಿಸಬೇಕು.]

**ಕಾರ್ಯದರ್ಶಿ :—** (ಎದ್ದು ಮೇಜಿನ ಬದಿಗೆ ನಿಂತು, ಅಧ್ಯಕ್ಷರನ್ನೊಮ್ಮೆ ನೋಡಿ, ಸಭೆಯನ್ನೆದುರಿಸಿ) ಸಭಿಕರೆ— (ಗಲಾಟೆ ಕಡಿಮೆಯಾಗದಿರಲು, ಕಿರುಚುವ ದನಿಯಲ್ಲಿ) ಮಾನ್ಯ ಅಧ್ಯಕ್ಷರೆ, ಭಾರತೀಯ ಬಂಧುಗಳೆ— ಇವತ್ತ ಸಭಾ ಕೂಡಿದ ಉದ್ದೇಶ ಹಸ್ತಪತ್ರಿಕೆಯಿಂದ ತಮಗೆಲ್ಲಾರಿಗೂ, ಎಲ್ಲಾರಿಗೂ ಇಲ್ಲದಿದ್ದರೂ ಕೆಲವರಿಗಾದರೂ— ಯಾಕಂದ್ರೆ ಕಾಗದ ಸಾಕಷ್ಟು ದೊರೆಯೋದಿಲ್ಲ ಅಂತ ಹಸ್ತಪತ್ರಿಕೆ ಛಾಪಿಸೋದಾಗಲಿಲ್ಲ— ಆದರೂ ಇವತ್ತಿನ ಉದ್ದೇಶ ನಿಮಗ ಗೊತ್ತದ ಅಂತ ತಿಳೀತೀನಿ! ನಂ ದೇಶಕ್ಕ ಎಂದೂ ಬರದಂಥಾ ಬರಗಾಲ ಬಂದದೆ. ಹುಳು ಸತ್ತ ಹಾಂಗ ಜನರು ಸಾಯ್ತಾ ಇದ್ದಾರಂತ, ಪೇಪರಿನೊಳಗ ನೀವು ಓದ್ತೀರಿ.

ಬಂಗಾಲದ ಹೆಸರು ‘ ಬರಗಾಲ ’ ಅಂತ ಬದಲ್ಮಾಡಿದ್ರೂ ನಡೀಬಹುದು, ವಿಜಾಪುರಕ್ಕ ‘ ವಜಾಪುರ ’ ಅನ್ನಬಹುದು— ಅಂಥಾ ಬರಗಾಲ! ಆದ್ದರಿಂದ ಇಂದಿನ ಸಭಾ ದುಃಖದ ಸಭಾ. ಇಡಿಯ ದೇಶಕ್ಕ ದುಃಖ ಆಗೇದ. ಈ ದುಃಖದಿಂದ ನಾವೆಲ್ಲಾರೂ ಒಂದಾಗುವಂತಹ ಆಪ-ದ್ಬಾಂಧವ್ಯ ನಮ್ಮಲ್ಲಿ ನೆಲಸಿದೆ ಅನ್ನಲಿಕ್ಕ ಇವತ್ತ ಮಾತನಾಡುವವರ ಲಿಸ್ಟ್ ನೋಡಿದರ ನಿಮಗ ತಿಳಿಯೋದು. ಪಾರ್ಟಿ, ಜಾತಿ, ಸಂಪ್ರದಾಯ—ಎಲ್ಲಾ ಮೀರಿ ಇವತ್ತು ನಾವೆಲ್ಲಾರೂ ಒಂದಾಗೀವಿ. ಇಂದಿನ ಸಭಾ ನಮ್ಮ ಸುದೈವ ಅನ್ನಬಹುದು. ಒಕ್ಕಟ್ಟಿನಿಂದ ಬಿಕ್ಕಟ್ಟು ದಾಟೋ ಉತ್ಕಟ ಶಕ್ತಿ ನಮ್ಮಲ್ಲಿ ಬರತದ - ಅನ್ನೋ ಭರವಸದಿಂದ, ತಮ್ಮೆಲ್ಲರ ಪತಿಯಿಂದ, ಇಂದಿನ ಸಭಾಕಾರ್ಯ ಸುರೂ ಮಾಡ್ಬೇಕು ಅಂತ ಅಧ್ಯಕ್ಷರಿಗೆ ಬೇಡಿಕೊಂಡು—ಬರಗಾಲದ ಸಲುವಾಗಿ ನನಗೇನು ಹೇಳೋದದ ಅದನ್ನ ಆಭಾರ ಮನ್ನಿಸೋವಾಗ ಹೇಳ್ತೀನಿ. (ಸರಿದು ಕೂಡುವನು. ಒಂದೆರಡೇ ಚಪ್ಪಾಳೆ.)

**ಅಧ್ಯಕ್ಷ** :— (ಚಪ್ಪಾಳೆಯ ರಭಸ ಹೆಚ್ಚುವಾಗ ಮೆಲ್ಲನೆ ಎದ್ದು) ನನ್ನ ಪ್ರೀತಿಯ ಬಾಂಧವರೆ, ಈಹೊತ್ತು ಉಪಚಾರದ ಮಾತಿನ ಪ್ರಸಂಗ ಅಲ್ಲ. ನನ್ನ ಯಾಕೆ ಅಧ್ಯಕ್ಷ ಮಾಡಿದಿರಿ ಎಂಬುದು ನಿಮಗೇ ಗೊತ್ತು. ಯಾಕೆಂದ್ರೆ, ಅಧ್ಯಕ್ಷನಾಗಿ ವೈಭವದಿಂದ ನಿಲ್ಲಲು ಕಾಲ್ಗಳೆ ಏಳೋದಿಲ್ಲ. ನನ್ನ ಎದುರು ಕಾಣೋದು ಇಲ್ಲಿ ಚಪ್ಪಾಳೆ ತಟ್ಟುತ್ತ ಕುಳಿತ ಜನಸಮೂಹ ಅಲ್ಲ. ನನಗ ಕಾಣಿಸೋದು ಕುರುಕ್ಷೇತ್ರ, ಕಲಿಯುಗದ ಕುರುಕ್ಷೇತ್ರ; ನನ್ನ ಮಿತ್ರರೂ, ಆಪ್ತರೂ, ಇಷ್ಟರೂ, ಗುರು-ಹಿರಿಯರೂ ಹಿಂಡು ಹಿಂಡಾಗಿ, ಬರಗಾಲಕ್ಕಾಗಿ ಹಿಂಡುಹಿಪ್ಪೆಯಾಗಿ, ಅನ್ನ ಕಾಣದೆ, ದೇಹ ವನ್ನಿಟ್ಟು ಬಿದ್ದ ಜನಸಮೂಹ. (ಚಪ್ಪಾಳೆಗಾಗಿ ತಡೆಯುವನು. ಚಪ್ಪಾಳೆ ಇಲ್ಲದ್ದನ್ನು ಕಂಡು—ಕಾರ್ಯದರ್ಶಿ ಒಬ್ಬನೇ ಸಭಿಕರನ್ನು ನೋಡುತ್ತ ಚಪ್ಪಾಳೆ ತಟ್ಟುವನು. ಆಗಲೂ ಚಪ್ಪಾಳೆ ಇಲ್ಲದ್ದಕ್ಕಾಗಿ ಅವಸರದ ದನಿಯಲ್ಲಿ) ಸಾಕು. ಇದು ಚಪ್ಪಾಳೆಯ ಪ್ರಸಂಗವಲ್ಲ. ಅದೇ ಕೈಗಳಿಂದ ನಮ್ಮ ಲಕ್ಷಾವಧಿ ಬಾಂಧವರಿಗೆ ತುತ್ತನ್ನುಣಿಸಬೇಕಾಗಿದೆ. ಈ ಕಾರ್ಯದಲ್ಲಿ ನಾವೆಲ್ಲರೂ ಒಂದಾಗಿದ್ದೇವೆ ಎಂಬುದಕ್ಕೆ ಇಂದು ನಮ್ಮೆದುರು ಮಾತ ನಾಡುವವರೇ ಸಾಕ್ಷಿ. ಈ ಕಾರ್ಯಕ್ಕೆ ನಾವು ದಕ್ಷರಾಗಿದ್ದೇವೆ

ಎಂಬುದಕ್ಕೆ ಬರಗಾಲ ಸಮಿತಿಯ ಕಾರ್ಯದರ್ಶಿಗಳು ಇಂದು ಸಭೆಯನ್ನು ಕರೆದದ್ದೇ ಸಾಕ್ಷಿ. ಇನ್ನು ಹೆಚ್ಚು ಹೊತ್ತು ಕಳೆಯದೆ ತಮ್ಮೆಲ್ಲರ ಅಪ್ಪಣೆಯಿಂದ ಮೊದಲು, ನಮಗೆಲ್ಲರಿಗೂ ಹಿರಿಯರಾದ, ಧರ್ಮ-ಕರ್ಮ-ವಾದ-ವೇದಾಂತ ಶಿರೋಮಣಿಗಳಾದ ಸಂಪ್ರದಾಯ ಸವ್ಯಸಾಚಿಗಳಾದ, ವೈದಿಕ ಸಂಘಕ್ಕೆ ಕಳೆದ ೩೦ ವರ್ಷಗಳಿಂದ ಅಧ್ಯಕ್ಷರಾದ ಪಂಡಿತ ಹರಿಸರ್ವೋತ್ತಮಾಚಾರ್ಯರನ್ನು ಕೇಳಿಕೊಳ್ಳುವೆ. (ಅವರನ್ನು ನೋಡುವನು. ಅವರು ನಮಸ್ಕರಿಸಿ, ಎದ್ದು ಬಂದು ಮೇಜಿನ ಹತ್ತಿರ ನಿಲ್ಲುವವರೆಗೆ ತಾನೂ ನಿಂತು, ಅವರು ಮುಖ ತಿರುಗಿಸಿ ತನ್ನನ್ನು ನೋಡಲು ಕುಳಿತುಕೊಳ್ಳುವನು.)

ಹ. ಸ. **ಆಚಾರ್ಯ**:— ನಾನು ಸಭಾಭವನದ ವಕ್ತಾರನಲ್ಲ, ಅಧ್ಯಕ್ಷರಿಗೆ ಗೊತ್ತಿದೆ. ದೇಶದಲ್ಲಿ ಕ್ಷಾಮ. ಒಂದು ಕಡೆ ಅಶನ ಇಲ್ಲದೆ ಜನರು ಸಾಯ್ತಾ ಇದ್ದಾರೆ; ಇನ್ನು ಉಳಿದವರು — ನಾವೂ — ಅಶನ ದೊರಕಿಸೋದಕ್ಕೆ ಅಂಗಡಿಯ ಮುಂದೆ ಸಾಯ್ತಾ ಇದ್ದೀವಿ. ಒಟ್ಟು ಪರಮಾತ್ಮನ ಕೋಪಾನುಗ್ರಹ ನಮ್ಮ ಮೇಲೆ ಆದಂತೆ ಇದೆ. ನಾವು ಧರ್ಮ ಬಿಡೋದು ಬೇಡ, ಕರ್ಮ ಕೆಡಿಸೋದು ಬೇಡ; 'ವಿನಾಶಾಯ ಚ ದುಷ್ಕೃತಾಂ' ಅಂತ ಹೇಳಿದಾತಾ ಆ ಭಗವಂತಾ, ಇವತ್ತು ಬರಗಾಲದ ರೂಪದಿಂದ ಇಳಿದು ಬಂದಿಲ್ಲ ಅಂತ ಮಾನವ ಮಾತ್ರರಾದ ನಮ್ಮ ಪಾಮರ ಬುದ್ಧಿಗೆ ಹ್ಯಾಗೆ ಗೋಚರ ಆದೀತು? ಅದಕ್ಕೇ ನಾವೆಲ್ಲರೂ ನಂನಮ್ಮ ಕರ್ತವ್ಯಕರ್ಮದೊಳಗೆ ನಿಷ್ಠಾ ತೋರಿಸಿದರೆ ಕ್ಷಾಮಪೀಡೆ ತಪ್ಪೋದರಲ್ಲಿ ಸಂದೇಹವಿಲ್ಲ. ನಾನು ಸಭಾ-ಭವನದ ವಕ್ತಾರನಲ್ಲ ಅಂತ ಹೇಳಿದೆ- ಯಾಕೆಂದರೆ ನಾವೂ ನೀವೂ ಮಾತಾಡಬೇಕೆಂದ್ರೆ ಎಷ್ಟರವರು? ಮಾತಾಡಿಸುವವ (ಮೇಲೆ ತೋರಿಸುತ್ತ) ಆತ ಇದ್ದಾನೆ. ಆತನ ಅನುಗ್ರಹ ನಾವೆಲ್ಲರೂ ಸಂಪಾದನೆ ಮಾಡ್ಬೇಕು. (ಅಧ್ಯಕ್ಷರ ಕಡೆ ಮುಖ ತಿರುಗಿಸಿ ನೋಡಿ, ಮಾತನ್ನು ಮುಗಿಸುವುದೊ ಸಾಗಿಸುವುದೊ ಎಂಬ ಅನುಮಾನದಲ್ಲಿ ಕೊನೆಗೆ ಹೋಗಿ ಕುಳಿತುಕೊಳ್ಳುವರು.)

**ಅಧ್ಯಕ್ಷ**:— (ಎದ್ದು) ನಾನು ಮೊದಲೇ ಹೇಳಿದಂತೆ ಹಿರಿಯರು ತಮ್ಮ ಆಶೀರ್ವಾದದಿಂದ ನಮ್ಮನ್ನು ಅನುಗ್ರಹಿಸಿದರು. ಈಗ ನಮ್ಮೆಲ್ಲರ

ಸಾರ್ವಜನಿಕ ಜೀವನದ ಮೂರ್ತಿಯಂತಿದ್ದ ನಮ್ಮ ಮುಂದಾಳು ನೂಕಪ್ಪಣ್ಣನವರು ಮಾತನಾಡುವರು; (ಕುಳಿತುಕೊಳ್ಳಬೇಕೆನ್ನುವಾಗ ಮತ್ತೆ ಎದ್ದು ನಿಂತು) ಮಾತನಾಡಬೇಕು ಅಂತ ನನ್ನ ಪ್ರಾರ್ಥನೆ.

**ನೂಕಪ್ಪಣ್ಣ** :— (ಚಪ್ಪಾಳೆಯ ಗರ್ಜನೆಯಲ್ಲಿ ಮುಂದೆ ಬಂದು, ಅಧಿಕಾರದ ದನಿಯಲ್ಲಿ) ಬಾಂಧವರೆ, ಇಂತಹ ಪ್ರಸಂಗದೊಳಗೆ ಮಾತನಾಡೋದು ನನ್ನ ಸುದ್ದೈವ ಅಂತ ಹೇಳ್ತೀನಿ. ನಾನು ಈಗ ಜೇಲಿನಲ್ಲಿರಬೇಕಾಗಿತ್ತು; ನನ್ನ ಕರ್ತವ್ಯ ಅಲ್ಲಿ ಅದೆ; ಭಾರತಮಾತೆ ನನ್ನನ್ನು ಅಲ್ಲಿ ಕರೀತಾ ಇದ್ದಾಳೆ. ಆದರೆ ಗಂಟಲಿನ ಆಪರೇಶನ್ನಕ್ಕಂತ ನನ್ನ ಬಿಡುಗಡೆ ಆಯಿತು. ನನ್ನ ಗಂಟಲು ಗುಣ ಆದದ್ದು, ದೇಶಬಾಂಧವರ ಗೋಳಿಗಾಗಿ ದುಃಖದಿಂದ ತುಂಬಿಬರಲಿಕ್ಕೇನೋ ಅಂತ ಅನ್ನಿಸತದ. ನಮ್ಮ ದೇಶ ಒಂದು ಕಾಲದಲ್ಲಿ ಸುವರ್ಣದೇಶ; ಈಹೊತ್ತು ತಿಂದು ಬದುಕಬೇಕೆಂದರೆ ಸುವರ್ಣಗಡ್ಡೆ ಕೂಡ ನಂಪಾಲಿಗಿಲ್ಲ. ನಾವು ಪರತಂತ್ರರು. ನಮಗೆ ಸ್ವಾತಂತ್ರ್ಯ ದೊರೆಯದ ಹೊರತು ಬರಗಾಲ ನಿವಾರಣೆ ಆಗೋದಿಲ್ಲ. ಬಂಗಾಲದ ಬರಗಾಲಕ್ಕೆ ಬ್ರಿಟಿಶರು ಕಾರಣ; ಬಿಜಾಪುರದ ಬರಗಾಲಕ್ಕೂ ಬ್ರಿಟಿಶರೆ ಕಾರಣ! ಬ್ರಿಟಿಶ ಹಿಂದುಸ್ತಾನದೊಳಗೇ ಬರಗಾಲ ಯಾಕೆ ಬರಬೇಕು? ಅದಕ್ಕೆ ನಾ ಹೇಳ್ತೀನಿ, ಭಾರತಮಾತೆಯ ದಾಸ್ಯ ವಿಮೋಚನೆ ಆಗದ ಹೊರತು—ಅಂದ್ರೆ—ನಮಗೆ ಸ್ವರಾಜ್ಯ ಸಿಕ್ಕದ ಹೊರತು ಬರಗಾಲ ತಪ್ಪಿದ್ದಲ್ಲ. ಅದಕಾಗಿ ನೀವು ತಯಾರಾಗಬೇಕು; ಜೇಲಿಗೆ ಹೋಗಲಿಕ್ಕೂ ತಯಾರಾಗಬೇಕು! ಹೆಚ್ಚಿಗೆ ಮಾತನಾಡೋದಿಲ್ಲ ನಾನು. ಮಾತಿನ ದಿವಸ ಮುಗಿದುವು. (ಚಪ್ಪಾಳೆಯ ಅಬ್ಬರದಲ್ಲಿಯೆ ನಡೆದು ಕುಳಿತುಕೊಳ್ಳುವನು.)

**ಅಧ್ಯಕ್ಷ** :— (ಅರ್ಧ ಎದ್ದು) ನಮ್ಮೂರ ತರುಣರ ಮುಂದಾಳು, ನಮಗೆಲ್ಲಾರಿಗೂ ಪ್ರೀತಿಯವರಾದ **ಯಾಕಪ್ಪಣ್ಣ**.

**ಯಾಕಪ್ಪಣ್ಣ** :— (ನಾಟಕದ ಠೀವಿಯಿಂದ) ಕಾಮ್ರೇಡರೆ, ಗೆಳೆಯರೆ— ಮಾತಿನ ದಿವಸ ಮುಗಿದುವು ಅಂತ ನನ್ನ ಮುಂಚಿನವರು ಹೇಳಿದರು. ಆದ್ರೆ ಮಾತಿನ ದಿವಸ ಈಗ ಬಂದಾವ ಅಂತ ನನ್ನ ವಿಚಾರ.

(ಗಹಗಹಿಸುವ ನಗೆ) ಯಾಕಂದ್ರೆ, ಇಷ್ಟು ದಿವಸ ಯಾರಿಗೂ ಮಾತಾಡೋ ಧೈರ್ಯಾನೇ ಇರಲಿಲ್ಲ. ಇದ್ದದ್ದನ್ನ ಇದ್ದಂತೆ ಮಾತಾಡೋ ಕಾಲ ಈಗ ಬಂದದೆ ಅಂತ ನಾನು ಹೇಳ್ತೀನಿ. ಬರಗಾಲ ಯಾಕೆ ಬಂತು? ಕಾಳು-ಕಡಿ ಇಲ್ಲ ಅಂತ! ಕಾಳು-ಕಡಿ ಯಾಕೆ ಇಲ್ಲ? ದುಡ್ಡಿದ್ದವರು ಅದನ್ನೆಲ್ಲ ಕೊಂಡಿಟ್ಟರು ಅಂತ! ಅದಕ್ಕ ನಾ ನಿಮಗ ಹೇಳ್ತೀನಿ— ದುಡ್ಡಿದ್ದವರೆಲ್ಲಾ ಕೂಡಿ ಮಾಡಿದ ಕಾರಸ್ಥಾನ ಈ ಬರಗಾಲ ಅಂದ್ರೆ! ದುಡ್ಡಿದ್ದವರು ಬ್ರಿಟಿಶರೂ ಇದ್ದಾರೆ. ನಮ್ಮವರೂ ಇದ್ದಾರೆ. ಒಟ್ಟು, ಬಡವರ ಮ್ಯಾಲೆ ತಂ ಬಲೀ ಬಿಗಿತ ಹಿಡಿಯಲಿಕ್ಕೆ ಸಿರಿವಂತರು ಈ ಬರಗಾಲ ತಂದಾರ. ಬಡವರ ರಾಜ್ಯ ನಿಲ್ಲಿಸೋತನಕ ಈ ಬರಗಾಲ ಬಿಟ್ಟದ್ದಲ್ಲ ಅಂತ ಬರೆದುಕೊಡತೀನಿ (ಒಳಗಿನಿಂದ 'ಕಾಗದಾ ಐತಿಯೋ—' ಗಹಗಹಿಸುವ ನಗೆ, ಆನರಿಂದ ಕನಲಿ) ಇದ್ದ ಕಾಗದಾ ಎಲ್ಲಾ ಪ್ರಾಮಿಸರಿ ನೋಟ್ ಬರೀಲಿಕ್ಕೆ ನೀನೇ ತಕ್ಕೊಂಡ ಹಾಂಗೆ ಕಾಣ್ತದೆ! (ನುಕ್ಕೆ ನಗೆ) ಬರಗಾಲದ ಕಮೀಟಿವಳಗ ಬಡವರ ಪಾರ್ಟಿ ಮೆಂಬರ್ ಒಬ್ಬ ಇರಬೇಕು. ಅಂತ ನನ್ನ ಸೂಚನಾ ಅದ. (ಸಿಟ್ಟಿನ ಮುದ್ರೆಯಿಂದ ಹೋಗುವನು)

**ಅಧ್ಯಕ್ಷ:—** (ಎದ್ದು) ನ್ ಯಾಕಪ್ಪಣ್ಣನವರ ಸೂಚನಾ ಯೋಗ್ಯ ಆದ. ಅದನ್ನ ಲಕ್ಷ್ಯದೊಳಗ ಇಡೋಣ. ಇನ್ನು ಮೇಲೆ ಮಾತಾಡು ವವರು— (ಎನ್ನುವಾಗ ಕಾರ್ಯದರ್ಶಿ ಲಗುಬಗೆಯಿಂದ ಬಂದು ಏನನೊ ಕಿವಿಯಲ್ಲಿ ಹೇಳಲು, ಅಲೆದೂಗುತ್ತ ಕುಳಿತುಕೊಳ್ಳುವನು.)

**ಕಾರ್ಯದರ್ಶಿ :—** (ಮುಂದೆ ಬಂದು) ಮಾತನಾಡುವವರ ಲಿಸ್ಟ್ ನಾವು ಮಾಡುವಾಗ, ಒಬ್ಬ ದೊಡ್ಡ ಮನುಷ್ಯರು ಊರಲ್ಲಿರಲಿಲ್ಲ. ಇಷ್ಟರ ಲ್ಲಿಯೆ ಅವರು ಬಂದಿದ್ದಾರೆ. ಈ ಸಭೆಯ ವರ್ತಮಾನ ತಿಳಿದ ಕೂಡಲೆ, ಪ್ರವಾಸದ ಶ್ರಮ ಮರೆತು ಸರಳ ಸಭೆಗೆಯೆ ಬಂದಿದ್ದಾರೆ. ಅವರು ಯಾರು ಅಂತ ಹೇಳಬೇಕಾಗಿಲ್ಲ. ಎಷ್ಟೋ ಜನರು ಅವರನ್ನ ನೋಡದಿದ್ದರೂ ಅವರ ನಾಟಕ ನೋಡಿ— (ಚಪ್ಪಾಳೆ ಗದ್ದರಿಸಲು ತಡೆದು ನಗೆಮುದ್ರೆಯಿಂದ ತನ್ನ ಸ್ಥಾನಕ್ಕೆ ಹೋಗುವನು)

(ಒಂದೆರಡು ನಿಮಿಷ ಯಾರೂ ಎದ್ದು ಬರುವುದಿಲ್ಲ. ಚಪ್ಪಾಳೆ ಹಾಗೆಯೆ ಸಾಗಲು ನಾಟಕಕಾರನ ಮೂರ್ತಿ ನಡೆದು ಬಂದು ನಿಲ್ಲುವುದು.)

**ನಾಟಕಕಾರ** :— 'ಮುಂದೆ ಹೋಗಿ ಮಾತಾಡಿರಿ' ಅಂತ ನನ್ನ ನೂಕಿದವರು **ನೂಕಪ್ಪಣ್ಣನವರು** (ನಗೆ). 'ನೀವು ಯಾಕೆ ಮಾತಾಡೋದಿಲ್ಲ?' ಅಂತ **ಯಾಕಪ್ಪಣ್ಣನವರು.** (ಜೋರಾದ ನಗೆ) ಇವರಿಬ್ಬರ ತ್ರಾಸದಿಂದ ನಾ **ಸಾಕಪ್ಪಣ್ಣ** ಆಗೀನಿ, ನಿಂಮುಂದ ನಿಂತೀನಿ (ತಡೆಯದಂತಹ ನಗೆ). ಬಂಗಾಲದೊಳಗ ಬರಗಾಲ ಅದೆ, ಪೇಪರಿನೊಳಗೆ ಓದತೀರಿ; ಪೇಪರಿಗೂ ಬರಗಾಲ, ಅದಕ್ಕೆ ನಾ ಬರೆಯೋದನ್ನ ಬಿಟ್ಟು ಮಾತಾಡಲಿಕ್ಕೆ ನಿಂತೀನಿ (ನಗೆ). ವಾಮನಾವತಾರಕ್ಕ ಮೂರು ಕಾಲು ಇದ್ದವು. ಕೇಳೀರಲ್ಲ? ಒಂದು ಬಂಗಾಲ, ಒಂದು ಕಂಗಾಲ, ಮೂರನೆಯದು ಬರಗಾಲ (ಮತ್ತೆ ನಗೆ). ಮೂರು ಕಾಲಿದ್ದರ ನಡೀಲಿಕ್ಕೆ ಎಡಚು. ಎರಡಾದರೂ ಬೇಕು, ನಾಲ್ಕಾದರೂ ಬೇಕು. ಎರಡೂ ಬಿಟ್ಟು ಮೂರು ಆದದ್ದಕ್ಕ ಎಡಚ ಆಗಿ, ಕಾಲಿಗೆ ಕಾಲ ತೊಡಕಾಲು ಹೊಡೀತೊ ಏನೊ—(ಉಕ್ಕೇರುವ ನಗೆ). ಬಂಗಾಲ ಬರಗಾಲದೊಳಗೆ ಸಿಕ್ಕಿಬಿಟ್ಟಿತು. ಈ ಹೊತ್ತು ನಾವು ಸಭಾ ಸೇರಿಸಿದ್ದು ಆ ತೊಡಕು ಹ್ಯಾಂಗ ಬಿಡಿಸಬೇಕು ಅಂತ. ಮಾತು ಆಡೋ ದಿವಸ ಮುಗಿದುವು ಅಂಬೋ ನೂಕಪ್ಪಣ್ಣನವರ ಮಾತಿಗೆ ನಾನು ಕೈ ಎತ್ತೀನಿ. ಅದಕ್ಕೇ ಹೆಳ್ತೀನಿ, ಮಾತು ಆಡೋದು ಬ್ಯಾಡ; ಆಡೋದಾದ್ರ ನಾಟ್ಕಾ ಆಡೋಣ, ಬಂದ ದುಡ್ಡೆಲ್ಲಾ ಬಂಗಾಲಕ್ಕೆ ಕೊಡೋಣ; ಉಳಿದ ದುಡ್ಡು ಮುಂದಿನ ವರ್ಷದ ಬರಗಾಲಕ್ಕೆ ಕಾಯ್ದಿಡೋಣ! (ನಗೆ ಮತ್ತು ಚಪ್ಪಾಳೆ) (ನಡೆದು ಹೋಗುವಾಗ ಕಾರ್ಯದರ್ಶಿ, ಅಧ್ಯಕ್ಷ ಮೊದಲಾದವರನ್ನು ನೋಡುತ್ತ ಹೋಗುವನು. ಅವರಾದರೂ ತನ್ನನ್ನು ನೋಡಿದಾಗ ನಗುತ್ತ ಚಪ್ಪಾಳೆ ತಟ್ಟುವರು.)

**ಅಧ್ಯಕ್ಷ** :— (ಎದ್ದುನಿಂತು) ಪೇಪರಿಗೆ ಸುದ್ದಿ ಕೊಡವ್ರು ಇಲ್ಲಿ ಇದ್ರೆ ಅವರು ಈಗ ಮಾತನಾಡಿದವರ ಹೆಸರು 'ಸಾಕಪ್ಪಣ್ಣ' ಅಲ್ಲ 'ಶ್ರೀರಂಗ' ಅಂತ ಬರೆದುಕೊಡಬೇಕು (ಮತ್ತೆ ನಗೆ). (ಗಾಂಭೀರ್ಯವನ್ನು ತಾಳಿ) ಇನ್ನುಮೇಲೆ ನಮ್ಮ ಮಹಿಳೆಯರ ಆತ್ಮೋನ್ನತಿಗಾಗಿ ಹೆಣಗುವ **ಶ್ರೀಮತಿ ತೂಕಮ್ಮನವರು** ಮಾತನಾಡುವರು, ಎಲ್ಲರೂ ಸಭ್ಯಚಿತ್ತರಾಗಿ ಕೇಳಿಕೋಬೇಕು.

[ಕುಳಿತವರು ತಂತಮ್ಮ ಕುರ್ಚಿಗಳನ್ನು ಸರಿಸಿ ದಾರಿ ಮಾಡಿ ಕೊಡುತ್ತಿರುವಾಗ ತೂಕಮ್ಮ ನಡೆದು ಬರುವಳು ]

**ತೂಕಮ್ಮ :—** ಪ್ರಿಯ ಭ್ರಾತೃ-ಭಗಿನಿಯರೆ, ಇಂದಿನ ಬರಗಾಲದ ಸುದ್ದಿಯಿಂದ ನಮ್ಮ ಇಡಿಯ ದೇಶದ ಹೆಣ್ಮಕ್ಕಳಿಗೆ ಬಹಳ ಮನೋವ್ಯಥೆ ಆಗಿದೆ. ಹೆಣ್ಣಿನ ಕರುಳು ತಾಯಿಯ ಕರುಳು. ಉಪವಾಸ ಸಾಯು-ವವರ ಚಿತ್ರ ನೀವು ಪೇಪರಿನಲ್ಲಿ ನೋಡೀರಿ. ಜೀವ ಹೋದ ತಾಯಿಯ ಮಗ್ಗುಲಲ್ಲಿ ಮೊಲೆಗೂಸು ಹಂಬಲಿಸುವುದನ್ನು ನೀವು ನೋಡೀರಿ! ಅದೊಂದು ಕೂಸಿನ ದನಿಯಿಂದ ಇಡಿಯ ದೇಶದ ಹೆಣ್ಮಕ್ಕಳ ಹೃದ-ಯಕ್ಕ ಕಳವಳ ಆಗಿದೆ. ಗಂಡನೇ ಗತಿ ಅಂತ ಬೆಳೆದು, ಗಂಡ ಉಪವಾಸದಿಂದ ಸಾಯೋವಾಗ ತನಗೆ ಉಪವಾಸೇ ಗತಿ ಅಂತ ಹೆಂಗಸು ತಿಳೀಬೇಕಾಯ್ತು. ಹೆಣ್ಮಕ್ಕಳಿಗೆ ಸಮಾಜದಲ್ಲಿ ಸ್ವಾತಂತ್ರ್ಯ ಇದ್ದರೆ, ಹೆಂಗಸರ ಕೈಯೊಳಗ ರಾಜ್ಯ ಇದ್ದರೆ ಆ ತಾಯಿಗರುಳು ಇಂಥಾ ಬರಗಾಲ ಎಂದಿಗೂ ಬರಗೊಡುತ್ತಿದ್ದಿಲ್ಲ. ಹೆಂಗಸರಿಗೂ ಎಲ್ಲಾ ಹಕ್ಕು ಇದ್ದರೆ, ಜಗತ್ತಿನೊಳಗೆ ಯುದ್ಧ ಇರತಿರಲೇ ಇಲ್ಲ. ಹೆಂಗಸರು ಮನೆಯ ಹೊರಗ ಕಾಲಿಡ್ಬಾರದೂ ಅನ್ನುವವರು, ಈ ಹೊತ್ತು ಬೀದಿಯ ಬಯಲೊಳಗ ಬಾಯಿಬಿಟ್ಟು ಬರಿನ್ಮೈಲೆ ಸಾಯೋ ಹೆಣ್ಮಕ್ಕಳ ಸಲುವಾಗಿ ಏನ್ಮಾಡ್ತಾರ? ಅದಕ್ಕೇ ನಾವು ಹೇಳ್ತೀವಿ, ಹೆಣ್ಮಕ್ಕಳಿಗೆ ಸ್ವಾತಂತ್ರ್ಯ ಬೇಕು ಅಂತ! ಅಂದ್ರ ಈ ಹೊತ್ತು ಬಂಗಾಲದ ಜನರ ಉಪಚಾರ ಆರೈಕೆ ಮಾಡಲಿಕ್ಕೆ ಎಷ್ಟೋ ತಾಯಂದಿರು ಮುಂದಾಗ ಬಹುದು. ಮಾತಾಡೋ ದಿವಸ ಮುಗಿದುವು ಅಂತ ಮತ್ತೂ ಮಾತೇ ಆಡ್ತಾರ ಗಂಡಸರು; ಆದರೆ ಹೆಣ್ಮಕ್ಕಳು ಹುಟ್ಟಾ ಉಪಚಾರ ಮಾಡು-ವವರು, ಉಪನ್ಯಾಸ ಕೊಡುವವರಲ್ಲ. (ಎಂದು ಸೆರಗನ್ನು ಸರಿಪಡಿಸಿ ಹೊರಡುವಳು ! ಚಪ್ಪಾಳೆ)

**ಕಾರ್ಯದರ್ಶಿ :—** (ಥಟ್ಟನೆ ಎದ್ದು ಬಂದು) ಸಭಿಕರೆ, ಈ ಹೊತ್ತು ಶ್ರೀಮತಿ ತೂಕಮ್ಮನವರು ಹೇಳಿದ ಮಾತು ಬಹಾಳೇ ಮನನೀಯವಾಗಿವೆ. ಈ ಕಾರ್ಯಕ್ರಮ ಮುಗಿಯೋವರೆಗೆ ಅವರಿಗೆ ಕೂಡಲಿಕ್ಕೆ ಪುರಸೊತ್ತಿಲ್ಲ. ಅದಕ್ಕೆ, ಇಷ್ಟೊಂದು ಕೆಲಸದ ಒತ್ತಾಯ ಇದ್ದರೂ ಬಂದು ಮಾತಾಡಿದರು ಅಂತ ಈಗ ತಮ್ಮೆಲ್ಲರ ಪರಿಯಿಂದ ಅವರ ಆಭಾರ

ಮನ್ನಿಸತೀನಿ. ಮತ್ತೆ, ಇನ್ನೂ ಒಬ್ಬಿಬ್ಬರು ಮಾತಾಡುವವರು ಇದ್ದಾರೆ, ಅವರದಾದ ಮೇಲೆ ನನಗ ಹೇಳಬೇಕಾದ್ದನ್ನ ಹೇಳ್ತೀನಿ.

**ಅಧ್ಯಕ್ಷ :—** (ಎದ್ದು ನಿಂತು) ಬರಗಾಲದ ಮಹತ್ತ್ವ ದೇಶಕ್ಕೆ ಎಷ್ಟಿದೆ ಅಂಬೋದನ್ನ ಈ ಹೊತ್ತು ನಂ ಸಭಾ ನೋಡಿ ಖಾತ್ರಿ ಮಾಡಿಕೋ ಬೇಕು ಅಂತ ನಾ ಮೊದಲೇ ಹೇಳಿದ್ದೆ. ಆ ಮಾತು ಯಥಾರ್ಥ ಅನ್ನೋದಕ್ಕ ಇನ್ನು ಮೇಲೆ ತಂ ಮುಂದೆ ನಿಲ್ಲೋ ಕವಿಗಳೆ ಸಾಕ್ಷಿ. (ಚಪ್ಪಾಳೆ) ಅವರ ಮಾತು ನೀವು ಕೇಳಿಕೋಬೇಕು. (ಕುಳಿತುಕೊಳ್ಳು ವನು)

[ಒಳಗಿನಿಂದ 'ಕವಿತಾ ಅಂದು ತೋರಿಸಿರಿ' 'ಹೌದು, ಬರಗಾಲದ ಮ್ಯಾಲೆ ಬರೆದಿದ್ದರೆ—' ಎಂಬ ಕೂಗು ಕೇಳಬರಲು]

**ಅಧ್ಯಕ್ಷ :—** (ಮತ್ತೆ ಎದ್ದು) ಇವತ್ತಿನ ಪ್ರಸಂಗ ಎಂತಹಾದ್ದು ಅಂಬೋದನ್ನ ತಾವು ಲಕ್ಷದಾಗ ಇಡ್ಬೇಕು, ಬರಗಾಲದಂತಹ ಗಂಭೀರ ಪರಿಸ್ಥಿತಿಯ ಬಗ್ಗೆ ಕವಿಗಳು ಮಾತನಾಡುವವರಿದ್ದಾರೆ, ಕೇಳಿಕೋಬೇಕು. (ಕುಳಿತುಕೊಳ್ಳುತ್ತ) ಕವಿತಾದೊಳಗ ಬರಗಾಲ ಬರೋದಿಲ್ಲ ಅಂಬೋದು ಅವರಿಗೇ ಹೆಚ್ಚು ಗೊತ್ತು.

**ಕವಿ :—** (ಚಪ್ಪಾಳೆಯು ಅಬ್ಬರದಲ್ಲಿ ನಡೆದು ಬಂದು) ನಾನು ಕವಿತಾ ಓದೋದಿಲ್ಲ, ತಾವು ತಾಳ ಒಡೀಬಾರ್ದು (ನಗೆ ಚಪ್ಪಾಳೆಯೂ ತಡೆಯುವುದು) ಕವಿತಾದೊಳಗ ಬರಗಾಲ ಬರೋದಿಲ್ಲ ಅಂದ್ರ, ಬರಗಾಲದ ಸಭಾದಾಗ ಕವಿ ಯಾಕ ಬಂದ ಅಂತ ನೀವು ಕೇಳ್ಬಹುದು (ನಗೆ)— ಅಂದ್ರ ಕೇಳಿದ್ರಿ ಅಂತ ತಿಳಿಯೋಣ. ಅದನ್ನೇ ನಾ ಇಲ್ಲಿ ಹೇಳಲಿಕ್ಕೆ ಬಂದೀನಿ. ಇಲ್ಲಿಯ ವರೆಗೆ ನಡೆದ ಭಾಷಣ ಕೇಳಿದರೆ ಇಂದಿನ ಸಭಾಕ್ಕ ನನ್ನಂತಹ ಒಬ್ಬ ಬಡಕವಿಯ ಭಾಷಣಾನೂ ಅಗತ್ಯ ಅಂತ ಅನ್ನಿಸಿತು. ಬರಗಾಲ, ಉಪವಾಸ, ಸಾವು, ತಾಯಿಕರುಳು—ಇಂಥಾ ಮಾತುಗಳನೆಲ್ಲಾ ಹೇಳುವವರು ಜೀವನವನ್ನೆ ಯೋಗ್ಯ ದೃಷ್ಟಿಯಿಂದ ನೋಡಿಲ್ಲ ಅಂತ ಹೇಳಬಹುದು. ಯಾಕಂದ್ರೆ, ಜೀವನ ಅಂದರೆ ತಿನ್ನೋದೊಂದೇ ಅಲ್ಲ. Man does not live by bread alone. ಅನ್ನ ತಿಂದು ಬದುಕಿಕೊಂಡು ಇರೋದಾದ್ರ ಮಿಕ್ಕ ಪ್ರಾಣಿಗಳಿಗಿಂತ ಮನುಷ್ಯ ಏನು ಹೆಚ್ಚಿನವ ಆದ? ಅಲ್ಲ—ಅಂದ್ರೆ—ಮಿಕ್ಕ

ಪ್ರಾಣಿಗಳಿಗಿಂತ ನಾವು ಹೆಚ್ಚಿನವರು ಅಂತ ನೀವು ತಿಳಿದುಕೊಂಡೀರಿ ಅನ್ನೋ ಕಲ್ಪನಾದಿಂದ ಹೇಳ್ತೇನಾ ಈ ಮಾತನ್ನ ? (ಅಲ್ಲಲ್ಲಿ ನಗೆ) ಮನುಷ್ಯ ಭಾವನಾ ಜೀವಿ, ಬಕ್ಕರಿ-ಜೀವಿ ಅಲ್ಲ. ಅನ್ನ ಇಲ್ಲಿದ್ರೆ ಸಾಯೋದು ಹೊರಗಿನ ದೇಹ, ಒಳಗಿನ ದೇವ ಅಲ್ಲ! ಅನ್ನದ ಹಂಗು ನಮಗಿಲ್ಲ ಅಂತ ತೋರಿಸಲಿಕ್ಕೆ ವರ್ಷಾನುವರ್ಷ ಅನ್ನ-ಬಿಟ್ಟು ಬದುಕಿದ ಯೋಗಿಗಳು ನಮ್ಮ ದೇಶದಲ್ಲಿದ್ದರು. ಆದರೆ ಈಗ ನಾವು ಎಂತಹ ಸ್ಥಿತಿಗೆ ಬಂದೀವಿ ? ನೀವು ಯಾವುದೆ ನಿರ್ಣಯ ಮಾಡಿರಿ, ಆದ್ರೆ ಈ ವಿಚಾರಾನೂ ಲಕ್ಷದಾಗ ಇಟ್ಟೆರ್ರಿ ಅಂತ ನಾ ಹೇಳೋದು. ಮಾತು ಬ್ಯಾಡ ಅನ್ನೋದನ್ನ ನಾನೂ ಒಪ್ತೇನಿ, ಆದ್ರೆ ಅನ್ನ-ಬೇಕೇನು ?—ಅಂತ ನಾ ಕೇಳೋದು. (ಹೋಗುವನು. ಹೊರಟ ತರುವಾಯ ಚಪ್ಪಾಳೆ ಗದ್ದರಿಸುವುದು).

**ಅಧ್ಯಕ್ಷ** :— (ಎದ್ದು ನಿಂತು, ಕಾರ್ಯದರ್ಶಿಯನ್ನು ಕೈಸನ್ನೆಯಿಂದ ಕರೆದು, ಅವನೊಡನೆ ಏನೋ ಪಿಸುಗುಟ್ಟಿ, ತರುವಾಯ ಗಂಟಲನ್ನು ಸರಿಪಡಿಸಿಕೊಂಡು) ಹಿರಿಯರ ಆಶೀರ್ವಾದದಿಂದ ಪ್ರಾರಂಭ ಆದ ಈ ಕಾರ್ಯಕ್ರಮದೊಳಗೆ ಇನ್ನೊಬ್ಬ ಹಿರಿಯರಿಂದ ಮುಕ್ತಾಯ ಆಗ್ಬೇಕು ಅನ್ನೋದೂ ಒಂದು ಸುಯೋಗ, ಅದು ಈ ಹೊತ್ತು ಕೂಡಿ ಬಂದಿದೆ. ಈಗ ಎಲ್ಲರಿಗೂ ಅನುಭವ ಹಿರಿಯರಾದಂಥಾ, ನಮ್ಮ ನಗರದ ಆಧಾರ ಸ್ತಂಭರಾದಂಥಾ 'ಮಹಾರಾಯ್ ಬಹಾದ್ದೂರ್' ಮೂಕಪ್ಪನವರು ಮಾತಾಡುವವರಿದ್ದಾರೆ. ತಾವೆಲ್ಲರೂ ಮೌನಚಿತ್ತರಾಗಿ ಕೇಳಿಕೋಬೇಕು. (ಕುಳಿತುಕೊಳ್ಳುವನು)

**ಮ ರಾ. ಬ. ಮೂಕಪ್ಪ** :—(ಮುಂದೆ ಬಂದು) ಸನ್ಮಾನ್ಯ ಅಧ್ಯಕ್ಷರೆ ಮತ್ತು ಬಂಧು-ಭಗಿನಿಯರೆ, ಈ ದಿನ ತಾವು ಈ ಸಭೆಯಲ್ಲಿ ಮಾಡಿದ್ದನ್ನು ನೋಡಿ ನನಗೆ ಸಂತೋಷವಿದೆ. ಆದರೆ ತಾವು ಒಮ್ಮೆಲೆ ಯಾವ ನಿರ್ಣಯಕ್ಕೂ ಬರಬಾರದು ಅಂತ ನನ್ನ ವಿನಂತಿ ಆದ. ಯಾಕಂದರ, ಇಷ್ಟು ಜನರು ಕೂಡಿದಾಗ ನಿರ್ಣಯಕ್ಕ ಬರೋದು ಅವಸರದ ಕೆಲಸ ಆದೀತೇನೋ ಅಂತ ನನಗ ಧಾಕ (ಹೆದರಿಕೆ) ಅದ. ಬಂಗಾಲದೊಳಗ ಮಂದಿ ಸಾಯ್ತಾರ ಅಂಬೋದೇನೊ ಖರೆ ( = ನಿಜ ). ಆದ್ರೆ ಅಷ್ಟಕ್ಕೆ

ನಮಗೇನು ಮಾಡಲಿಕ್ಕೆ ಬರತದ? ಎಷ್ಟು ಜನಾ ಸಾಯ್ತಾರ, ಯಾವ ಕಾರಣಕ್ಕ ಸಾಯ್ತಾರ, ಮುಂತಾಗಿ ಅಂಕಿ-ಸಂಖ್ಯಾ ಎಲ್ಲಾ ಮಾಹಿತಿ ಸರಕಾರಕ್ಕ ಗೊತ್ತು. ಸರಕಾರದವರು ಇದರದೆಲ್ಲಾ ವಿಚಾರ ಮಾಡಿ ಯೋಗ್ಯ ಕಂಡದ್ದನ್ನ ಮಾಡ್ತಾರ ಅಂಬೋದರ ಖಾತ್ರಿ ಅದ ನನಗ. ಅಲ್ಲೀತನಕಾ ಬೇಕಾದರ ನಾವೂ ಒಂದು ಕಮಿಟಿ ಮಾಡೋಣ. ಈವತ್ತಿನ ಅಧ್ಯಕ್ಷರು ಆ ಕಮಿಟಿಯ ಅಧ್ಯಕ್ಷರು, ತಮ್ಮ ವಿಚಾರಗಳನ್ನ ನಿಮ್ಮ ಮುಂದ ಇಟ್ಟವರೆಲ್ಲಾ ಕಮಿಟಿಯ ಮೆಂಬರರು (ನನಗೆ ವಯಸ್ಸಾಯಿತು, ನನ್ನ ಬಿಟ್ಟುಬಿಡಿರಿ.) ಈ ಕಮಿಟಿಯವರು ಮಾಹಿತಿ ಎಲ್ಲಾ ಕೂಡಿಸಲಿ, ಏನ್ಮಾಡ್ಬೇಕಂಬೋದನ್ನ ನಮಗ ಹೇಳಲಿ, ನಾವೂ ನೀವೂ ಮಾಡಲಿಕ್ಕೆ ಸಿದ್ಧ. (ಚಪ್ಪಾಳೆ. ಇದೇ ಯೋಗ್ಯ ಸಮಯವೆಂದು ತಿಳಿದು ಕುಳಿತುಕೊಳ್ಳುವನು.)

[ಕೆಲಹೊತ್ತು ಶಾಂತತೆ. ಆ ಮೇಲೆ—]

**ಅಧ್ಯಕ್ಷ**:— (ಎದ್ದು) ನನ್ನ ಸಹದೇಶಾಭಿಮಾನಿಗಳೆ, ಈ ಹೊತ್ತು ನಾವೆಲ್ಲರೂ ಏಕಕಂಠರಾಗಿ ನಮ್ಮ ಕಳಕಳಿಯನ್ನ ವ್ಯಕ್ತಮಾಡಿದಿವಿ. ನಮ್ಮ ಮಹಾರಾಯ್‌ಬಹಾದ್ದೂರರು ಹೇಳಿದಾಂಗ ಇಲ್ಲಿಂದಿಲ್ಲೇ ಒಂದು ಕಮಿಟಿ ಮಾಡೋಣ, ನಾಳಿನಿಂದ ಕೆಲಸಕ್ಕ ಪ್ರಾರಂಭ ಮಾಡೋಣ. ಚಪ್ಪಾಳೆಯಿಂದ ತಾವು ಈ ಮಾತಿಗೆ ಒಪ್ಪತೀರಿ ಅಂತ ನನ್ನ ನಂಬಿಗೆ. (ಚಪ್ಪಾಳೆ). ) (ಗಾಂಭೀರ್ಯವನ್ನು ತಾಳಿ) ಬಾಂಧವರೆ, ನಾನು ಮೊದಲೇ ಹೇಳಿದಂತೆ ಇಂದಿನದು ದುಃಖದ ಪ್ರಸಂಗ. ಉಪವಾಸಕ್ಕ ಆಹುತಿಯಾದವರ ಬಗ್ಗೆ ನಮ್ಮ ಸಹಾನುಭೂತಿಯನ್ನ ನಾವೆಲ್ಲರೂ ಎದ್ದುನಿಂತು ವ್ಯಕ್ತಮಾಡೋಣ. (ಸಭಿಕರು ಎದ್ದು ನಿಲ್ಲುವರು. ಒಳಗಿನಿಂದ ‹ ಕುಂತ್ಕುಂತು ಕಾಲ ಜುಂಹಿಡಿದೇತಿ ’ ಎಂಬ ದನಿ. ಅಲ್ಲಲ್ಲಿ ನಗೆ, ಅಧ್ಯಕ್ಷ ಸಿಟ್ಟಿನಿಂದ ನೋಡುವನು. ದೂರದಲ್ಲಿ ಯಾರನ್ನೊ ನೋಡಿದಂತೆ ಮಾಡಿ) ಈ ಸಭಾದೊಳಗ ವಿರಸಮಾಡ್ತಿಯಾರು ಯಾರಾದರೂ ಅಂತ ನನಗ— (ಇಷ್ಟರಲ್ಲಿ ಒಳಗಿನಿಂದ ಒಂದು ವ್ಯಕ್ತಿ ಧಾವಿಸುತ್ತ ನಡೆದು ರಂಗಭೂಮಿಯ ಮೇಲೆ ಬರಲು ತಡೆಯುವನು).

**ವ್ಯಕ್ತಿ**:— (ಆಶ್ಚರ್ಯದ ದನಿಯಲ್ಲಿ) ಸಭಾದ ಕೆಲಸ ಇರಸ ಯಾರ್ ಮಾಡ್ತಾರೀ, ಯಪ್ಪ? ಹಾಂಗ ಕೇಳಿದ್ರ ನೀವ್ ಹೇಳಾಕ ಮುಂಚೇ

ಏಳ್ಬೇಕಂದಿದ್ನಿ. ಆದ್ರೆ ಅದೇ ಹೇಳಿದೆನಲ್ಲ ಕಾಲ ಜುಂ ಹಿಡಿತೂತ—
(ಅಲ್ಲಲ್ಲಿ ನಗೆ.)

**ಕಾರ್ಯದರ್ಶಿ**:— (ಮುಂದೆ ಬಂದು) ಇವತ್ತಿನ ಸಭಾಕಾರ್ಯ ಮುಗಿಸೋ ಮುಂಚೆ ನಾನು ಎಲ್ಲಾರದೂ (ವ್ಯಕ್ತಿಯನ್ನು ಸಿಟ್ಟಿನಿಂದ ನೋಡುತ್ತ) ಎಲ್ಲಾರದೂ ಆಭಾರ ಮನ್ನಿಸ್ತೀನಿ. ಹೊತ್ತು ಬಹಳ ಆಗೇದ, ಆದ್ರೂ ಅಧ್ಯಕ್ಷರ ಆಭಾರ ಮನ್ನಿಸದೇ ಇರೋದು ಶಕ್ಯ ಇಲ್ಲ. ಅವರು—

**ವ್ಯಕ್ತಿ**:— (ಅತ್ತಿತ್ತ ನೋಡುತ್ತ) ಸಭಾ ಮುಗಿಸ್ತ್ಯಾತ್ರಿ, ಹಿರೇರ! ನಂದು ಒಂದೀಟ ಹೇಳೋದೈತಿ—

**ಅಧ್ಯಕ್ಷ**:— (ಎದ್ದು, ಅಧಿಕಾರದಿಂದ) ಈಹೊತ್ತಿನ ಸಭಾಕಾರ್ಯ ಮುಗಿಯಿತು.

**ವ್ಯಕ್ತಿ**:— (ಮುಂದೆ ಬಂದು) ಹಿರೇರ, ನಾ ಮಾತಾಡೋದಿಲ್ರಿ—ನನ್ಕೆಲಸ ಅಂದ್ರ—ಆದ್ಯಾರೊ ಉಪಾಸ ಸಾಯ್ತಾರ ಅಂದಿರೆಲ್ಲ—ಇಕ!—(ಹೊತ್ತ ದೋತರದ ಚುಂಗದ ಗಂಟನ್ನು ಬಿಚ್ಚಿ) ಅವರೆಲ್ಲಿರ್ತಾರ ನನಗೊತ್ತಿಲ್ಲ—ಈ ಮುಕ್ಕದಾಣಿ ಅವರಿಗೆ ಮುಟ್ಟಿಸಿದರ—

**ಕಾರ್ಯದರ್ಶಿ**:—ನಾಳಿನಿಂದ ಕಮಿಟಿಯ ಕೆಲಸ ಸುರುವು. ಕಮಿಟಿಯ ಕಚೇರಿಗೇ ತಂದ್ಕೊಡು.

**ವ್ಯಕ್ತಿ**:— ಬಂಗಾಲ ಅಂದ್ರ ಯಾವೂರು ಅಂತ ನನಗೊತ್ತಿದ್ರ ನಾ ಯಾಕ ನಿಮಗ ತರಾಸ ಕೊಡ್ತಿದ್ನಿರಿ—?

**ಅಧ್ಯಕ್ಷ**:— (ತಿಳಿಸಿ ಹೇಳುವವನಂತೆ) ಈಗ ಸಭಾದ ಕೆಲಸ ಮುಗೀತು.

[ಗಹಗಹಿಸುವ ನಗೆ. ಅದನ್ನು ಕೇಳಿ ವ್ಯಕ್ತಿ ಪೆಚ್ಚನಂತೆ ಅತ್ತಿತ್ತ ನೋಡಿ ಕೊನೆಗೆ ಧೈರ್ಯವಿಲ್ಲದೆ ಮನಸ್ಸಿಲ್ಲದೆ ಹೊರಟು ಹೋಗುವನು. ಕೆಲ ಹೊತ್ತಿನಲ್ಲಿ ಸಭೆ ಬರಿದಾಗುವುದು. ಭಾಷಣಕಾರರೆಲ್ಲ ಒಬ್ಬರೊಬ್ಬರ ಹತ್ತಿರ ಬಂದು ಸ್ನೇಹಸಂಭಾಷಣೆಯಲ್ಲಿ ತೊಡಗುವರು.]

**ಅಧ್ಯಕ್ಷ**:— (ವ್ಯಕ್ತಿ ಹೋದತ್ತ ನೋಡುತ್ತ) ಯಾವೂರ ಹುಂಬನೊ!

**ನೂಕಪ್ಪಣ್ಣ**:— ಈಗ ಹುಂಬ ಅನ್ನೋಹಾಂಗ ಇಲ್ರಿ! ಧಾರಣಿ ಏರಿದ್ದಕ್ಕೆ ದುಡ್ಡು ಮಾಡಿಕೊಂಡವರ ಪೈಕಿ ಇರ್ಬೇಕು ಇಂವ!

**ನಾಟಕಕಾರ**:— ಅಹುದು. ಈ ‘ಹಾಕಪ್ಪಣ್ಣಾ’ ಅವರದೂ ಒಂದು ಜಾತೀನೇ ಆಗೇದ!

[ನಗೆ]

**ಅಧ್ಯಕ್ಷ**:— (ಕೈಗಡಿಯಾರವನ್ನು ನೋಡುತ್ತ) ಎಷ್ಟು ಹೊತ್ತಾಯ್ತೊ!

**ಕಾರ್ಯದರ್ಶಿ**:—(ಹುಸಿನಗೆಯಿಂದ) ಇನ್ನೇನು ಬಹಾಳ ತಡ ಇಲ್ಲ. ಇಲ್ಲೇ ಬರಗಾಲ ಕಚೇರಿವಳಗ್ಗೇ ಚಹಾದ ವ್ಯವಸ್ಥಾ ಆಗೇದ—

**ಹ. ಸ. ಆಚಾರ್ಯ**:—ಚಹಾ!

**ಯಾಕಪ್ಪಣ್ಣ**:— ಚಹಾದ ಹೊತ್ತಲ್ಲ ಇದು—

**ಕಾರ್ಯದರ್ಶಿ**:— (ಆಚಾರ್ಯನನ್ನು ನೋಡುತ್ತ) ಬಾಳೇಹಣ್ಣೂ ಇವೆ.... (ಯಾಕಪ್ಪಣ್ಣನನ್ನು ನೋಡಿ) ಚಹದ ಹೊತ್ತು ಅಲ್ಲ ಅಂತ ನಮಗೂ ಗೊತ್ತಿದೆ. (ಗಹಗಹಿಸುವ ಹುಸಿನಗೆಯಿಂದ) ಅದಕ್ಕೇ ಒಂದಿಷ್ಟು ಅವಲಕ್ಕಿ, ಉಪ್ಪಿಟ್ಟು, ಶಿರಾ ಮಾಡಿಸೀನಿ.

**ಮ. ರಾ. ಬ. ಮೂಕಪ್ಪ**:—(ಹೆಮ್ಮೆಯಿಂದ) ನಿನ್ನ ವ್ಯವಸ್ಥಾದ ಮುಂದ ಕಲೆಕ್ಟರ್-ಗವರ್ನರರ ವ್ಯವಸ್ಥಾ ಸುದ್ಧಾ (ಸಹಿತ) ಝುಕ್ಕಿಸಿತು, ನೋಡೊ! (ತುಸು ನಗೆ)

**ಅಧ್ಯಕ್ಷ**:— ಹೋಗೋಣ ಹಾಗಾದ್ರ, ಲಗೂನೆ ಮುಗಿಸಿ!

**ಕವಿ**:— ಅಂದ್ರೆ ಊಟಕ್ಕೂ ಅದಕ್ಕೂ ಅಂತರ ಇರ್ಲಿ ಅಂತ—ವ್ಯಂಗ್ಯಾರ್ಥ. ಹಹ!

(ನಿರುಪಾಯರಾದವರಂತೆ ಎಲ್ಲರೂ ನಗುತ್ತ ಹೊರಡುವರು.)

[ತೆರೆ.]

## ಪಾತ್ರಗಳು

(ಮಧ್ಯ ವಯಸ್ಕ) ನರಸಿಂಗರಾಯ.

ತಮ್ಮಣ್ಣಾಚಾರಿ.

ಹಳ್ಳಿಗ.

(ನರಸಿಂಗರಾಯನ) ಹೆಂಡತಿ.

ಡಾಕ್ಟರ್.

## ರಂಗಸೂಚಿಕೆ

[ಬೆಳಗಿನ ೮|| ಸಮಯ ರಂಗಭೂಮಿಯ ಮಧ್ಯದಲ್ಲಿ ಕಾಣುವುದು ಒಂದು ಮನೆಯ ಮುಂಬದಿ. ಮೂರು ನಾಲ್ಕು ಪಾವಟಿಗೆಗಳನ್ನು ಹತ್ತಿದರೆ ಮನೆಯ ಮುಂಬಾಗಿಲು. ಬಾಗಿಲು ತೆರೆದಿದೆ. ಮಧ್ಯವಯಸ್ಕ ನೊಬ್ಬನು ಒಂದು ಶರ್ಟು ತೊಟ್ಟು, ಉಟ್ಟ ದೋತರದ ಬಲಬದಿಯ ಚುಂಗವನ್ನು (ಶಕ್ಯವಾದರೆ) ಹೆಗಲ ಮೇಲಿರಿಸಿ, ಹೊಸ್ತಿಲದ ಮೇಲೆ, ಕೈಯಲ್ಲಿ ಹಿಡಿದ ವೃತ್ತಪತ್ರವನ್ನೋದುತ್ತ ನಿಂತಿದ್ದಾನೆ. ತೆರೆಯು ಎದ್ದಾಗ ಮೊದಲು ಒಂದೆರಡು ಸಲ ಆಕಳಿಸಿ ಕಣ್ಣೊರೆಸಿಕೊಳ್ಳುವನು. ಪ್ರಯೋಗ ವನ್ನು ಹೂಡುವವರಿಗೆ ಶಕ್ಯವಾದರೆ ಪಾವಟಿಗೆಗಳ ಎರಡೂ ಬದಿಯಿಂದ ಗಟಾರು (ಚರಂಡಿ) ಹರಿಯುವಂತೆ ಒಂದು ಬದಿಗೆ ಒಳಗಿನಿಂದ ನೀರನ್ನು ತರುವಂತೆ ಬಚ್ಚಲವೋರೆಯನ್ನೂ ಕಾಣಿಸಬೇಕು. ಮಧ್ಯವಯಸ್ಕನು ತನ್ನಷ್ಟಕ್ಕೆ ಓದುವಾಗ ಒಂದೆರಡು ಸಲ 'ಎಲೆ!' 'ಥೂ!' 'ಅಯ್ಯೊ! ಮತ್ತೆ!' ಎಂದು ಬೇರೆ ಬೇರೆ ಉದ್ಗಾರಗಳನ್ನು ತೆಗೆಯುವನು. ಆ ಮೇಲೆ ಒಮ್ಮೆಲೆ ಸುದ್ದಿ ತಡೆಯದೆಂಬಂತೆ ನಟಿಸಿ, ಮುಖವನ್ನು ತಿರುಗಿ-ಸದೆ, ದೃಷ್ಟಿಯನ್ನು ಆ ಕನ್ನಡ ಪತ್ರಿಕೆಯಲ್ಲಿಯೆ ಇರಿಸಿ...]

**ಮಧ್ಯವಯಸ್ಕ** :— ಏನೆ–ಏ– ಕೇಳಿದೇನು ಬಂಗಾಲದೊಳಗ ಸಾಯೋವ್ರ ಕತೆ? ....ಆಂ—? ...ಏನಂದಿ?....ಏನೇನೇನು? (ನಕ್ಕು) 'ತುಂಗಾ-ಬಾಯಿಯವರ ಕತೆ'....ಅಲ್ಲ, ಬಂಗಾಲದೊಳಗ ಸಾಯೋವ್ರ ಕತೆ ಅಂದೆ....ಮತ್ತೆ ೨೦ ಮಂದಿ ಬಯಲು ಬೀದಿಯೋಳಗೇ ಸತ್ತರಂತೆ!.... (ತನ್ನಷ್ಟಕ್ಕೆ ಎಂಬಂತೆ) ಯಮರಾಯನ office ಇನ್ನೊಳ್ಗ · strike ಹೂಡೆದೊ ಏನೊ ಮಂದಿ ಹೀಂಗ ಬೇಕಾದಾಗ ಬೇಕಾದಲ್ಲಿ ಸಾಯ್ಲಿಕ್ಕೆ? (ಮತ್ತೆ ಒಳಗೆ ಉದ್ದೇಶಿಸಿ) ಏನು?....(ಆಶ್ಚರ್ಯ-ತಿರಸ್ಕಾರಮಿಶ್ರಿತ ದನಿ-ಯಲ್ಲಿ, ಇದೇ ಸುದ್ದಿಯೇನಂದ್ರ?

(ಅವನ ಎಡಬದಿಯಿಂದ):—ಎದ್ದೆ – ಎದ್ದೆ (ಎಂದು ದನಿ...ಅದನ್ನು ಕೇಳಿ ಚಕಿತನಾಗಿ ಅತ್ತ ನೋಡಲು ಮತ್ತೆ ದನಿ) ನೀವೆದ್ದಿರಾ, ನರಸಿಂಗರಾಯ್ರೆ?

**ನರಸಿಂಗರಾಯ** :— (ಇನ್ನೂ ತುಸು ಆಶ್ಚರ್ಯದಲ್ಲಿಯೆ) ಯಾರು? ತಮ್ಮಣಾಚಾರ್ರ, ಬರ್ರಿ —

**ತಮ್ಮಣಾಚಾರಿ** :— (ಬಂದು) ಯಾಕ ಇವತ್ತ ಬಡ ಆಚಾರೀಗ 'ಎದ್ದಿರಾ' ಅಂತ ಕೇಳೋ ಕೃಪಾ ಆಯ್ತು–? ಹ ಹ್ಹ!

**ನರಸಿಂಗರಾಯ**:— (ಚಕಿತನಾಗಿ) ನಿಮಗ–ನಿಮಗ ಕೇಳಿದೆನೆ ನಾ 'ಎದ್ದಿರಾ' ಅಂತ? (ತಲೆ ತುರಿಸುತ್ತ) 'ಎದ್ದಿರಾ' ಅಂತ—(ಒಮ್ಮೆಲೆ ನಕ್ಕು) ಹ ಹ ಹ! ಇನ್ನೂ ಚಹ ಕುಡಿದಿಲ್ಲ ಅಂತ ಗಂಟಲ ಸಾಫ ಆಗಿಲ್ಲೊ ಏನೊ? ಇದಕ್ಕೂ ಮುಂಚೆ ಒಮ್ಮೆ ಹೀಂಗೇ ಆಯ್ತು! ಬಂಗಾಲದ ಸಾಯೋವ್ರ ಕತೆ ತುಂಗಾಬಾಯಿಯವ್ರ ಕತೆ ಆಯ್ತು! ಮತ್ತೆ 'ಇದೇ ಸುದ್ದಿಯೇನು' ಅಂತ ಅಂದೆ, ನಿಮಗದು 'ಎದ್ದಿರಾ' ಅಂತ ಕೇಳಿಸ್ತು.... ಹ ಹ! ಚಹಾದಿಂದ ವಿಚಾರ ಸ್ಪಷ್ಟ ಆಗೋದಲ್ದೆ, ದನೀನು ಸ್ಪಷ್ಟ ಆಗೋದು ಅಂತ—ಹ ಹ!

**ತಮ್ಮಣಾಚಾರಿ** :— ಓಹೋ! ನಿಮ್ಮದೆ ಯಾವ್ದೊ ಸುದ್ದಿ ವಿಚಾರ್ದೊಳಗ ಇದ್ದಿರಾ? ಇರ್ಲಿ, ಮತ್ತೆ ಬರ್ತೀನಿ—

**ನರಸಿಂಗರಾಯ** :— ತಡೀರ್ರಿ, ತಮ್ಮಣಾಚಾರ್ರ .... ಸುದ್ದಿ ವಿಚಾರೇನೊ ಅಹುದು....ಒಳಗ ಹೆಂಡ್ತೀ ಜೋಡಿ ಮಾತ ನಡಿಸಿದ್ದೆ, ನಡಿಸಬೇಕು ಅಂತಿದ್ದೆ....(ಪಾವಟಿಗೆಗಳಿಂದ ಕೆಳಗೆ ಇಳಿಯುತ್ತ) ಆದ್ರೂ ನಿಮಗ್ಗೊತ್ತದೆ ಅಲ್ಲ?....ನಮ್ಗೂ ನಿಮ್ಗೂ ಮುಂಜಾನೆ ಪೇಪರಿನೊಳಗ ಸುದ್ದಿ ಅನಿಸಿದ್ದು ಹೆಂಗ್ಸರಿಗೆ ಮುಂಚಿನ ಸಂಜೆಗೇ ಗೊತ್ತಿರ್ತದೆ—ಹ ಹ! (ಒಮ್ಮೆಲೆ ಗಂಭೀರವಾಗಿ) ಆದ್ರೂ, ತಮ್ಮಣಾಚಾರ್ರ, ನಿಂತನಿಂತಲ್ಲೆ ಹೊಟ್ಟೆಗಿಲ್ದೇ ಸಾಯೋದೂಂದ್ರೆ—

**ತಮ್ಮಣಾಚಾರಿ** : — (ಹೊತ್ತುಕೊಂಡ ದೋತರವನ್ನು ಸರಿಪಡಿಸುತ್ತ) ನಿಂನ್ನಿಂತಲ್ಲೇ ಅಂದ್ರೇನು? ಯಮಧರ್ಮರಾಯ ಇಷ್ಟು ದಿವಸ ಮರ್ತು ಈಗ ಒಮ್ಮೆ 'ನಿಂತ್ನಿಂತಲ್ಲೇ ಬಾಕಿ ಒಗೆ' ಅಂತ ಉದ್ದರೀ ವಸೂಲ್ಮಾಡಿ ಧಾಂಗ ನಡೆದಿದೆ!....ಅಂ....ಇವತ್ತೇನು ಬಂದದ ಪೇಪರಿನೊಳಗ?

**ನರಸಿಂಗರಾಯ** :— (ಕೊನೆಯ ಪಾವಟಿಗೆಯ ಮೇಲೆ ಕೂಡ್ರುತ್ತ) ಬರ್ರಿ, ನೋಡಿ ಹೋಗ್ರಿ ಒಂದ್ನಿಮಿಷ ಪೇಪರು.

**ತಮಣಾಚಾರಿ** :— (ಬಂದು ಅವನ ಎಡಬದಿಗೆ ಕುಳಿತುಕೊಂಡು) ಮತ್ತೆ ಏನೋ 'ಮರಣ' ಅಂತೇ ಬಂಧಾಂಗ ಕಾಣ್ತದಲ್ಲ? (ಓರೆಗಣ್ಣಿನಿಂದ ಪೇಪರನ್ನು ನೋಡುತ್ತ ಕೇಳುವನು)

**ನರಸಿಂಗರಾಯ** :— (ತೋರಿಸುತ್ತ) ಮತ್ತೆ ಇಪ್ಪತ್ತು ಮಂದಿ ಸತ್ತರಂತೆ!

**ತಮಣಾಚಾರಿ** :— (ಚಕಿತನಾದವನಂತೆ) ಇಪ್ಪತ್ತು ಜನ! ನಮ್ಮ ಮಂದಿಯೋ, ಮುಸಲ್ಮಾನರೋ—?

**ನರಸಿಂಗರಾಯ** :— (ಲಕ್ಷ್ಯಗೊಟ್ಟು ನೋಡಿ) ಅದೇನು ಕೊಟ್ಟಿಲ್ಲ ಇಲ್ಲಿ— ಹೇಳಿ ಕೇಳಿ ಕನ್ನಡ ಪೇಪರು!—ಪೂರಾ ಸುದ್ದಿ ಕೊಡೋ ಹಾಂಗೇ ಇಲ್ಲ!

**ತಮಣಾಚಾರಿ** :— (ನಿರಾಶೆಯನ್ನು ಮುಚ್ಚುವ ತತ್ತ್ವಜ್ಞಾನದಲ್ಲಿ) ಪಾಪ! ಯಾವ ಜಾತಿ ಆದ್ರೇನು, ಜೀವ ಹೋದ ಮ್ಯಾಲೆ ಸಾಯ್ಲೇಬೇಕಲ್ಲ?

**ನರಸಿಂಗರಾಯ** ;— ಆದ್ರೂ, ತಮಣಾಚಾರ್ರ, ನೀವೇನ್ಬೇಕಾದ್ದನ್ರಿ, ಬೇಕಾದ್ರ ಇಂವ ಎಂಥಾ ಕಟುಕ ಅನ್ರಿ, ನನಗ ಈ ಬಂಗಾಲೀ ಜನರ ಮ್ಯಾಲೆ ಸಿಟ್ಟು ಬಂದಿದೆ ನೋಡ್ರಿ, ಮತ್ತ ಕೆಟ್ಟೊ ಅನಿಸೋದಿಲ್ಲ ನೋಡ್ರಿ, ಅವರ್ಹಿಂಗ ಸಾಯೋದ್ಕ....

**ತಮಣಾಚಾರಿ** :—(ವಾಗತ್ಯ ತಟ್ಟೀತೆಂಬಂತೆ) ಛೆ! ಛೆ! ಎಷ್ಟಾದ್ರೂ ನಮ್ಮವ್ರೆ- ನಮ್ಮಂಥವ್ರೆ—

**ನರಸಿಂಗರಾಯ** :— (ತನ್ನ ವಿಚಾರವನ್ನೆ ಮುಂದೆ ಸಾಗಿಸುತ್ತ) ಅಲ್ಲ—ಮಾತಿಗೆ ನಿಂತ್ರ—ಹಿಮಾಲಯದ ಶಿಖರದಿಂದ ಬರ್ಫದ ಬಂಡಿ ಉರುಳಿಸಿಧಾಂಗ ಶಬ್ದದ ಮೇಲೆ ಶಬ್ದ ಉರುಳಿಸ್ತಾರ—ಅದನ್ನ ಕೇಳಿದ್ರ ಇವರ ಬಾಯಿ ಮುಲುಕ್ ಮೈದಾನ ತೋಫಿಗಿಂತ ಮ್ಯಾಲೆ ಇರ್ಬಹುದು ಅನ್ನಿಸ್ತದ- ಇಂಥವ್ರು ಮಾತಿಲ್ದೆ ನಿಂನ್ನಿಂತಲ್ಲೆ ಪ್ರಾಣ ಬಿಟ್ರೂ ಅಂದ್ರ—ಇದೇನು ನಂಬಗೇಡಿಯೊ ನಗೆಗೇಡಿಯೊ ಅಂತೀನಿ! ಗುಬ್ಬಿ ಅಂತಹ ಗುಬ್ಬಿ ಜೀವ ಹೋಗುವಾಗ ಬಾಯಿ ಬಡೀತದ, ಒಂದು ಮಳೆಹುಳು ತುಂಡು ಮಾಡಿದರೆ ಸಾಯೋದಿಲ್ಲ ಅಂತ ಹಟದಿಂದ ಎರಡೂ ತುಂಡು ಒದ್ದಾ

ಡ್ತಾವ—ಅಂಥಾದ್ದು ಮ್ಯಾಲೆ ತಲೆ, ಕೆಳಗೆ ಮೂರೂವರೆ ಮೊಳ ದೇಹ, ನಡುವೆ ಭೂಮ್ಯಾಕಾಶ ಒಂದ್ಮಾಡೋವಷ್ಟುದ್ದ ನಾಲಗೆ— ಇಂಥಾ ಜನ ಸದ್ದಿಲ್ದೆ ಸಾಯ್ಲಿಕ್ಕೆ ಸಿದ್ಧ ಆಯ್ತು ಅಂಬೋದು—

**ತಮಣಾಚಾರಿ** :— (ಮೊದಮೊದಲು ಬೆರಗಾಗಿ, ಕೊನೆಗೆ ಗಹಗಹಿಸಿ ನಗುತ್ತ ) ಹ ಹ ಹ ಹ! ಹ ಹ ಹ! ಭಲೇ ಮೋಜ್ಮಾತು ನಿಮ್ದು, ನರಸಿಂಗ್ರಾಯ್ರೆ! ಹ ಹ! (ತಡೆದು ಗಂಭೀರವಾಗಿ) ಆದ್ರೂ ನೀವ್ಹೇಳೂದೂ ಹೌದು ಅನಿಸ್ತದ....ನಂ ಹುಡುಗು, ನೋಡ್ರಿ, ಉಪವಾಸಂತೂ ದೂರುಳೀಲಿ, ಊಟಕ್ಕೆ ತಡಾ ಆದ್ರ–

**ನರಸಿಂಗರಾಯ**:— (ಇನ್ನೂ ತನ್ನ ವಿಚಾರದಲ್ಲಿಯೆ)ಇವೆಲ್ಲಾ ತಪ್ಪು ದೇವರ್ದು

**ತಮಣಾಚಾರಿ** : — (ಒಮ್ಮೆಲೆ ಬೆದರಿದವನಂತೆ) ಏನೇನೇನ್‌ನಂದ್ರಿ ನರ್ಸಿಂಗ್ರಾಯ್ರ ?

**ನರಸಿಂಗರಾಯ** :— (ತಮಣಾಚಾರಿಯನ್ನು ಲಕ್ಷ್ಯಪೂರ್ವಕ ನೋಡುತ್ತ) ತಮಣಾಚಾರ್ರ, ತಪ್ಪೆಲ್ಲಾ ದೇವರ್ದು ಅಂದೆ ...ಇದ್ಮಾತಂದ್ರೆ, ಪಶು ಮತ್ತು ಮನುಷ್ಯ ಇವೆರಡರ ನಡುವಿನ ಜಾತಿ ನಾವು...' ನೀವೂ ಮನುಷ್ಯರು ' ಅಂತ ಸುಳ್ಳುಸುಳ್ಳೇ ನಮಗ ಸಮಾಧಾನ ಹೇಳಿ ಕಳಿಸಿದ ದೇವರ್ದು ಈ ತಪ್ಪು !

**ತಮಣಾಚಾರಿ** :— (ಮೆಲ್ಲಗೆ ಏಳುತ್ತ) ನಾನು ಹೊರಡ್ತೀನಿ ಹಾಗಾದ್ರ. ಹೊತ್ತಾಗ್ತಾ ನಡೀತು.

**ನರಸಿಂಗರಾಯ** :— (ನಗೆಯಿಂದ) ದೇವರಿಗೆ ನಾ ಆಡಿಕೊಂಡೇ ಅಂತ ನೊಂದ್ಕೊಂಡು ಎದ್ದಿರಲ್ಲ ? ಅಲ್ಲ—

[ಬಲಬದಿಯಿಂದ-'ಅವ್ವಾ. ತಾಯೀ, ಒಂತುತ್ತು ಅನ್ನ ನೀಡೇ ತಾಯೀ" ಎಂದು ಭಿಕ್ಷುಕಿಯ ದನಿ]

—( ಒಮ್ಮೆಲೆ ಸಿಟ್ಟಿನಿಂದ ಎದ್ದು ಆ ಕಡೆ ನೋಡುತ್ತ) ಏ, ನಡೀಲೆ, ಹುಚ್ಮುಂಡೆ! ಸೂರ್ಯನಕಿಂತ ಮುಂಚೇ ಬರ್ತಾಳ ರಾತ್ರಿಯಂಥಾ ರೂಪ ಕಟ್ಕೊಂಡು ! [ಧನಿ: - 'ಸ್ವಾಮೀ'] (ಗದ್ದರಿಸುತ್ತ,) ಏ ಹೋಗತ್ತ್ಯೊ ಏನು — (ತಮಣಾಚಾರಿಯನ್ನುದ್ದೇಶಿಸಿ) ನೋಡಿದ್ರಿಲ್ಲೊ — ಇವರ್ಗೇನಾದ್ರೂ ನಾಚಿಕೆ ಅದನ ಬಿಕ್ಷೆ ಬೇಡಲಿಕ್ಕೆ ?

**ತಮ್ಮಣಾಚಾರಿ** :— ಬೇಡಿಕೊಳ್ಳೋದು ಅಪರ್ಜಾತೀ ಧರ್ಮಾನೇ ಆಗೇದ—

**ನರಸಿಂಗರಾಯ** :— (ಆ ಕಡೆ ದಿಟ್ಟಿಸಿ ನೋಡುತ್ತ) ಬೇಡಿಕೊಳ್ಳಿಕ್ಕೆ ಬಂದ ಜಾತ್ರ್ಯೊ, ಏನು ಬೇಡಿ ಬಂದ ಜಾತ್ರ್ಯೊ! ಪಕ್ಕಕ್ಕೊಂದು ಏಕಾದಶಿ ಇಲ್ಲ, ಒಂದು ಬರಗಾಲಿಲ್ಲ—ಯಾಕ, ಹೊರಟೀ ಬಿಟ್ರಿಲ್ಲ?

**ತಮ್ಮಣಾಚಾರಿ** :— (ಸಂಕೋಚಪಡುತ್ತ) ಶೆಲ್ಲ—ಅಂದ್ರ— ನಂ ರಾಯರ ಮನೀಗೆ ಹೋಗ್ಬೇಕಾಗೇದ—ಅಂದ್ರ ಅವರೇ 'ಬಾ' ಅಂದ್ರು—'ನಂ ಹೊಲದ ಜೋಳ ಹ್ಯಾಂಗ ಅದ ನೋಡು, ಒಂದಿಷ್ಟು ತಕ್ಕೊಂಡು ಹೋಗು' ಅಂದ್ರು— ದೊಡ್ಡವರ ಕೆಲ್ಸ, ಒಲ್ಲಿ ಅಂದ್ರೂ ಸಿಟ್ಟು—

**ನರಸಿಂಗರಾಯ** :— (ಆತುರದಿಂದಾಗಿ) ಎಷ್ಟು ರುಪಾಯದ್ದು ಕೊಂಡುಕೊಳ್ಳು-ವವರು ನೀವು—

**ತಮ್ಮಣಾಚಾರಿ** :— (ಸುಳ್ಳು ನಗೆಯನ್ನು ಗಟ್ಟಿಯಾಗಿ ನಗುತ್ತ) ಕೊಳ್ಳೋದು! ಹ ಹ! ಆ ಮಾತು ನಾನಾಡಿದ್ರ ರಾಯ್ರು ಇನ್ನೊಮ್ಮೆ ತಮ್ಮನೀ ಹೊಸ್ತಿಲಾ ದಾಟಗೊಡಲಿಕ್ಕಿಲ್ಲ! ಹ ಹ! ನನ್ನಂಥಾವ ಅವರ್ಕಡಿಂದ ಕೊಳ್ಳೋದ— ? ಹ ಹ! (ಹೊರಡುವನು.)

**ನರಸಿಂಗರಾಯ** :— (ಅವನ ಹಿಂದಿನಿಂದ ನಡೆಯುತ್ತ) ತಮ್ಮಣಾಚಾರ್ರ— (ಆಚಾರ್ಯ ತಡೆಯುವನು). ನಿಂ ಮಾತು ಬ್ಯಾರೆ....ನಿಮ್ದು ಅವರ್ದು ಇಷ್ಟು ದಿನ ನಡೆದು ಬಂದದ್ದು, ನಿಮ್ಮ ಯೋಗ್ಯತಾಕ್ಕ ಅವ್ರು ಕೈಯೆತ್ತಿ ಕೊಡೋದು....ಅಲ್ಲ—ಅಂದ್ರ— ನನ್ನಂಥಾ ತಿರಾಯತ್ಗ ಮಾರಲಿಕ್ಕ ಏನಡ್ಡಿ ಅಂತ....? ಯಾರಿಗ್ಗೊತ್ತು ಎಂಥಾ ವ್ಯಾಳೆ ಬಂದೀತಂತ? ಓದೋದಿಲ್ವೆ ಈಗ ಬಂಗಾಲ್ದ ಭಯಾನಕ್ಕ? ಅದ್ಕ ನಿಕ್ರ ಒಂದಿಷ್ಟು ಮುಂಚೇ ಕೊಂಡಿಡೋಣಾ ಅಂತ ...ಹೆ ಹೆ!....ಅಂದ್ರ....ತಿನ್ದು ಇರೋ ಜೀವ ತಿನ್ನದೇ ಸಾಯ್ಲಿಕ್ಕೆ ಒಲ್ಲಿ ಅಂತದ ಅಂತ....ಹೆ ಹೆ!....ಹೆ ಹೆ ಹೆ!

**ತಮ್ಮಣಾಚಾರಿ** :—(ವಿಚಾರಮಗ್ನನಂತೆ) ಕೇಳಿ ನೋಡ್ತೇನಿ ರಾಯ್ರಿಗೆ—ಅಂದ್ರ ಬಾಯಿಯವ್ರಿಗೇ ಕೇಳ್ತೇನಿ—

[ಬಲಬದಿಯಿಂದ ಭಿಕ್ಷುಕಿಯ ದನಿ—'ಬಾಯೀ, ಓ ಬಾಯೀ, ಗೋದೂಬಾಯಿ— ']

**ನರಸಿಂಗರಾಯ** :— (ಸಿಟ್ಟಿನಿಂದ ತಿರುಗಿ) ಬಂದ್ಯಾ ನನ್ನ ಕಿಸವಾಯಿ? 'ಗೋದೂಬಾಯಿ' ಅಂತ! ಇಲ್ಲಿ ಜ್ವಾಳಕ್ಕ ಬಾಯ್ಬಾಯ್ಬಿಡಿವ್ರೀ,

ತನ್ನ 'ಗೋದೂಬಾಯಿೞ'ನ್ನ ತಂದಾಳ! (ಮುಂದೆ ಹೋಗುತ್ತ) ನಡೆ! ಹೋಗಿಲ್ಲಿಂದ....ಅಲ್ಲಿ ಆ ದೊಡ್ಡ ರಸ್ತೆ ಅದ ನೋಡು, ಅಲ್ಲಿದ್ದಾಳ ನಿನ್ನ ಗೋದೂಬಾಯಿ....(ನಡೆದು ಬಂದು ತಮಣಾಚಾರಿಗೆ) ಹೋಗಲಿ ಪೀಡಾ ದೊಡ್ಡ ರಸ್ತೇಕ್ಕ, ಒಂದು ಮಿಲಿಟರಿ ಮೋಟಾರಿನ ಕೆಳಗಾದ್ರೂ ಸಿಕ್ಕಿ ಸತ್ತೀತು! ಇವರ್ದ್ನೋಡಿದ್ರ ನನ್ಗ ಯಾವಾಗ್ಲೂ ಸಿಟ್ಟು ಬರ್ತ್ತದ ನೋಡ್ರಿ; ಇವರ ಮ್ಯಾಲೆ ಅಲ್ಲ, ಸರ್ಕಾರದ ಮ್ಯಾಲೂ ಸಿಟ್ಟು ಬರ್ತ್ತದ... ಎಲ್ಲಾರೂ ಕಡಿಮೆ ಊಟಾ ಮಾಡ್ಬೇಕೂಂತ ಸರ್ಕಾರದ ಹುಕುಂ.... ಯಾರಿಗೆ? ಮತ್ತ ನಮ್ಗೂ ನಿಮ್ಗೇ....ಇವರು ನೋಡ್ರಿ....ಕಡಿಮೆ ಮನೆ ಭಿಕ್ಷಾ ಬೇಡ್ತಾರೇನು?....ಅದ್ಕೇ ಹ್ಯಾಂಗ ಬರಗಾಲದ ಅಳಿಯ ಇದ್ದ್ಹಾಂಗ ಕೊಬ್ಬಿ ತಿರಗ್ತಾರ....ಮತ್ತ—ಬಾಯಿಯವರಿಗೆ ಕೇಳ್ಳಿಕ್ಕೆ—

**ತಮಣಾಚಾರಿ** :— ಕೇಳ್ತೇನಿ—ಅವಶ್ಯ ಕೇಳ್ತೇನಿ....ನನ್ದೇನದ ಹೇಳ್ರಿ, ಬಡ ಬ್ರಾಹ್ಮಣನ್ದು? ಅವರ್ದು ಧಾನ್ಯ, ನಿಮ್ದು ಧನ....

**ನರಸಿಂಗರಾಯ** :— ಅಲ್ಲ—ಧನ ಅಂದ್ಕೂಡ್ಲೆ ನೆನಪಾಯ್ತು—ನಿಂ ಹುಡುಗ್ಗ ನೋಕರಿ ಸಲುವಾಗಿ ಹೇಳ್ತೇನಿ ನಂ ಸಾಹೇಬ್ರಿಗೆ.

**ತಮಣಾಚಾರಿ** :—ಆದ್ರ ಆ ಹುಚ್ಮುಂಡೇಗಂಡನ ಹಣೇವಳಗ ಎಲ್ಲಿ ಬರಿದಿದೆ ತಂ ಕೈಯಿಂದ ಭಾಗ್ಯ ದೊರಕಿಸೋದು?

**ನರಸಿಂಗರಾಯ** :— (ಸಂಶಯದ ದನಿಯಲ್ಲಿ) ಯಾಕೆ—

**ತಮಣಾಚಾರಿ** :— ಎಲ್ಲೊ ಹೋಗಿ ಒಂದು ಮಿಲಿಟರಿ ನೋಕರಿ ಹಿಡಿದಿದೆ ಅವಲಕ್ಷಣ!

**ನರಸಿಂಗರಾಯ** :— (ಹೆದರಿಕೆಯನ್ನು ತೋರಿಸಿ) ಮಿ—ಲಿ—ಟ—ರಿ?

**ತಮಣಾಚಾರಿ** :— ಎಂಥಾದ್ದೋ ಏನೋ! ಮಿಲಿಟರಿ ಅಕೌಂಟ್ಸ—ಅಂತ! 'ಕೂಳಿಲ್ದೆ ಊರೊಳಗ ಸಾಯೋದ್ಕಿಂತ ಕುಳಿತು ತಿಂದು ಪರವೂರಾಗ ಸತ್ತರೆ ಏನು ಕೆಟ್ಟಿತು?' ಅಂತ ಮತ್ತೆ ನನ್ಗೇ ಬುದ್ಧಿ ಹೇಳ್ತಾನ! ಅವಿವೇಕಿ!

**ನರಸಿಂಗರಾಯ** :— ಅಂದ್ರ ನೀವು ರಾಯರಿಗೆ ಜ್ವಾಳದ ದಶಿಂದ— (ತಮಣಾಚಾರಿಯು ತಲೆತೂಗಲು, ಉಸುರ್ಗರೆದು ತತ್ತ್ವಜ್ಞಾನದ ದನಿಯಲ್ಲಿ) ತಮಣಾಚಾರ್ರ, ಒಟ್ಟು ದಿವಸ್ಗಾಲೇ ಕೆಟ್ಟ ಬಂದಾವ ಅದೇನ್ಸುಳ್ಳಲ್ಲ.

ನಿಮ್ಮಂಥವ್ರು ನಮ್ಮನೀಗೆ ಬಂದರ, 'ಬಂದಿರಾ, ಚಹ ತಗೋರಿ' ಅಂತ ಹೇಳೋದು ಕೂಡಾ ಕಠಿಣ—

**ತಮಣಾಚಾರಿ**:— ಛೆ! ಛೆ! ನರ್ಸಿಂಗ್ರಾಯ್ರು, ನಾಯೇನು ಚಹಕ್ಕ ನಿಮ್ಮಲ್ಲಿ ಒಲ್ಲೆ ಅಂದವ್ನ? ಆದ್ರ, ಈಗ ಹೊತ್ತೇ ಏರಿತು—

**ನರಸಿಂಗರಾಯ**:— ಈಗೇ ಅಂತಲ್ಲ, ಒಟ್ಟು ದಿವಸ್ಕಾಲದ ಮಾತ್ಹೇಳಿದೆ. ಚಹಕ್ಕ ಅಂತ ಇವತ್ತು ನೀರು ಎಸರಿಟ್ಟರ, ಸಕ್ರಿ ಸಿಗೋ ಹೊತ್ತಿಗೆ ಆ ನೀರು ಕುದಿದು, ಉಗಿಯಾಗಿ, ಮಳೆಗಾಲದ ಮಳೆಯಾಗಿ ಚಳಿಗಾಲದ ಬರ್ಫ ಆಗಿ ಐಸ್‌ಕ್ರೀಮು (icecream) ಕ್ಕೇ ಅನುಕೂಲ ಆಗೋದು.. ಇಂಥಾ ಕಾಲ ನಮ್ದೇಶಕ್ಕ ಎಂದೂ ಬಂದಿರಲಿಕ್ಕಿಲ್ಲ ಅಂತೀನಿ—

**ತಮಣಾಚಾರಿ**:— (ಪಾಂಡಿತ್ಯದ ಹಿರಿತನದಿಂದ) ಹಾಂಗ ಹ್ಯಾಂಗ ಹೇಳ್ತೀರಿ, ನರ್ಸಿಂಗ್ರಾಯ್ರು? ಒಂದಾನೊಂದು ಕಾಲಕ್ಕ ಇದೇ ನಂ ಭರತ ವರ್ಷ-ದೊಳಗ ಹನ್ನೆರಡು ವರ್ಷ ಮಳೆ ಬೀಳಲಿಲ್ಲ—

**ನರಸಿಂಗರಾಯ**:— (ಬೆಪ್ಪಾಗಿ) ಏನಿದ್ನ ಹೇಳ್ತೀರಿ—

**ತಮಣಾಚಾರಿ**:— 'ನ ವವರ್ಷ ದ್ವಾದಶ ವರ್ಷಾಣಿ', ಇಡೀ ಹನ್ನೆರಡು ವರ್ಷ ಮಳೆನೀರಿನ ಒಂದ್ಹನಿ ಇಲ್ಲ!

**ನರಸಿಂಗರಾಯ**:— (ಚಕಿತನಾದವನಂತೆ) ಸ್ವರ್ಗದೊಳಗೂ municpality ಯ experiment (ಪ್ರಯೋಗ) ಮಾಡಿ ನೋಡಿದರೊ ಏನು?.... ಅಲ್ಲ, ತಮಣಾಚಾರ್ರು, ಹನ್ನೆರಡು ವರ್ಷ ಮಳೆ ಇಲ್ಲಾಂದ್ರೆ ನಾವೆಲ್ಲಾ ಹುಟ್ಟಿದೆವು ಹ್ಯಾಂಗ ಅಂತೀನಿ—ಅಲ್ಲ, ಅಂದ್ರ—ಜಗತ್ತು ಉಳೀತು ಹ್ಯಾಂಗ ಅಂತೀನಿ —

**ತಮಣಾಚಾರಿ**: — ಅದಕ್ಕೇ ಅನ್ನೋದಲ್ಲೇನು ಮತ್ತ ಇದೆಲ್ಲಾ ಪರಮಾತ್ಮನ ಲೀಲಾ ಅಂತ?

**ನರಸಿಂಗರಾಯ**: — (ವಿಚಾರ ಹೊಳೆಯುತ್ತಲೆ) ಅಂದ್ರ ಬರಗಾಲಕ್ಕೂ ಸರಕಾರಕೂ ಏನೂ ಸಂಬಂಧ ಇಲ್ಲ ಅನ್ರಿ—ಅಲ್ಲಲ್ಲ, ಬರ್ಗಾಲಕ್ಕೂ ಪರಮಾತ್ಮಗೂ ಸಂಬಂಧ ಇಲ್ಲಾ ಅಂತ—ಯಾಕಂದ್ರ, ಮಳೆ ಬಿದ್ದಿತಲ್ಲ ಸಾಕಷ್ಟು?

[ಒಮ್ಮೆಲೆ ಬಲಬದಿಯಿಂದ:—'ಅಪ, ಹ್ವಾರೆ (—ಕೆಲಸ) ಏನಾದ್ರೂ ಐತೇನ್ರಿ?' ಎಂಬ ದನಿ]

(ತಿರುಗಿ ನೋಡಿ) ಮಳೆ ಬಿದ್ದಿತು ಅಂದ್ಕೊಡ್ಲೆ ಇಂವ ಯಾವ್ನೊ ಉದ್ದ ಕಿವಿಯುವ ಬಂದೇ ಬಿಟ್ಟಾಂಗ ಕಾಣ್ತದ!— (ಮತ್ತೆ ಆ ಬದಿಗೆ ನೋಡಿ) ಮುನ್ನೋಡಿ ಹೋಗೋ ಹ್ವಾರೆ ಕೊಟ್ಟೇತಿ! ನಡೆ! (ಗದ್ದರಿಸುತ್ತ) ಹೋಗೊ! (ತಮುಣಾಚಾರಿಗೆ) ನೋಡಿದ್ರಾ? ಬಿಕ್ಕೆ ಬೇಡ್ಲಿಕ್ಕೆ ನಾಚಿಕೆ ಬ್ಯಾರೆ! ಅದಕ್ಕ 'ಹ್ವಾರೇ'ದ್ದೊಂದು ನೆವ! ನಡೀ! ಹೊರಡು! ಎಲಾ! ಕಿವಿ ಕೇಳ್ತದೊ ಇಲ್ಲೊ!

[ಎನುವಾಗಲೆ ಹಳ್ಳಿಗನೊಬ್ಬನು ಬಲಬದಿಯಿಂದ ನಡೆದು ಬರುವನು. ಅವನ ಬಟ್ಟೆಗಳು ಹರಿದಿವೆ, ಹಸನಾಗಿವೆ. ಕೈಯಲ್ಲಿ ಒಂದು ಸಲಿಕೆ ಇದೆ, ಮುಖದಲ್ಲಿ ಗಡ್ಡ ಬಿರುಸಾಗಿ ಬೆಳೆಯುತ್ತಲಿದೆ, ಕಣ್ಣು ನೀರು ಬಿಡುವಂತಿವೆ, ಯಾವ ಲಕ್ಷಣದಿಂದಲೂ ಅವನ ವಯಸ್ಸು ಇಂತಿಷ್ಟು ಎಂದು ಹೇಳುವಂತಿಲ್ಲ; ದಿಟ್ಟಿಸಿ ನೋಡಿದರೆ ಇವನ ವಯಸ್ಸು ಮುಗಿದುಹೋಗಿದೆ ಎನ್ನಿಸುವಂತಿದೆ, ಅಂತಹದೊಂದು ದಣಿವ ದೀನ ಕಳೆ ಇದೆ ಅವನ ನೆರಳಿನಂತೆ. ನರಸಿಂಗರಾಯನು 'ನಡೆ' ಎನ್ನುತ್ತಿರುವಾಗಲೆ ಹಳ್ಳಿಗನು ಅವನನ್ನು ಅಲಕ್ಷಿಸಿ ತಮುಣಾಚಾರಿಯ ಕಡೆ ನಡೆದು ಬಂದು—]

**ಹಳ್ಳಿಗ:**— (ತಮುಣಾಚಾರಿಗೆ) ಸೋಮೋರ, ಹ್ವಾರೆ ಐತೇನ್ರಿ?

**ನರಸಿಂಗರಾಯ:**— (ಹಿಂದಿನಿಂದಲೆ ಒಂದು) ಯಾಕೊ? ರಸ್ತೇದೊಳ್ಗ ಭೆಟ್ಟಿ ಆದವ್ರಿಗೆ ಹ್ವಾರೇ ಕೇಳೂವಷ್ಟು ಬುದ್ಧಿ ಹೋಗೇದೋ ಏನ್ನಿನ್ನು? (ತನ್ನನ್ನು ಅಲಕ್ಷ್ಯ ಮಾಡಿದ್ದಕ್ಕೆ ಸಿಟ್ಟಿನಿಂದ) ಕಿವಿ ಕೇಳಸ್ತದೊ ಇಲ್ಲೊ? (ಹಳ್ಳಿಗನು ಅತ್ತಿತ್ತ ನೋಡುತ್ತ ರುಮಾಲದ ಚುಂಗದಿಂದ ಮೂಗನ್ನು ಮುಚ್ಚಿಕೊಳ್ಳಲು) ಏ— 'ಕಿವಿ' ಅಂದೆ, ಕಿವಿ! ಮೂಗು ಯಾಕ ಮುಚ್ಕೋತಿ?

**ಹಳ್ಳಿಗ:**— (ಅತ್ತಿತ್ತ ಏನನ್ನೊ ಹುಡುಕುವವನಂತೆಯೆ) ಏನೊ ವಾಸ್ನಿ (-ವಾಸನೆ) ಬರ್ತೈತ್ರಿ, ಕೆಟ್ಟ ವಾಸ್ನಿ... (ಮತ್ತೆ ತಮುಣಾಚಾರಿಗೆ) ನೀವ್ ಬೇಕಾದ್ ಹ್ವಾರೇ ಹೇಳ್ರಿ, ಸೋಮೋರ —

**ತಮುಣಾಚಾರಿ:**— ನೋಡ್ತೀನಪ ನಾನು. (ನ. ರಾಯನು ತನ್ನನ್ನು ಆಶ್ಚರ್ಯದಿಂದ ನೋಡಲು) ಅಂದ್ರ—ಬೇಕಾದ್ರ—ರಾಯರ್ಕಡೇ ಕರ್ಕೊಂಡು ಹೋಗ್ತೀನಿ ನಿನ್ನ....ಅಂಥಾ ಮನೆವಂತರ ಮನ್ಯಾಗ....

**ಹಳ್ಳಿಗ** :— ಭಾಳ ದೂರೈತ್ರೇನ್ರಿ? (ಈಗ ನರಸಿಂಗರಾಯನು ಒಮ್ಮೆ ಒಬ್ಬ-ನನ್ನು, ಒಮ್ಮೆ ಮತ್ತೊಬ್ಬನನ್ನು ಹೀಗೆ ಅವರವರು ಮಾತಾಡುತ್ತಿರುವಾಗ ಏನೂ ತಿಳಿಯದವನಂತೆ—ನಸು ಹುಬ್ಬು ಗಂಟೇರಿಸಿ-ನೋಡುತ್ತಿರುವನು). ಸೋಮೇರ, ಭಾಳ ದೂರಿದ್ರ, ಮದ್ದಿಣಮಟ ತಮ್ಮಲ್ಲಿ ಕೆಲ್ಸ ಹೇಳ್ರಿ.

**ತಮಣಾಚಾರಿ** :— (ನ. ರಾಯನ ಮನೆಯನ್ನು ತೋರಿಸುತ್ತ, ನಸುನಗೆಯಿಂದ) ಅದು ಈ ರಾಯರ ಮನೆ!

**ಹಳ್ಳಿಗ** :— (ಕೈಯೊಳಗಿನ ಸಲಿಕೆ ತಾನಾಗಿಯೆ ಬೀಳುತ್ತಿರುವಾಗ) ನಿಮ್ಮಸಿ ದೂರೈತೇನ್ರಿ?

**ತಮಣಾಚಾರಿ** :— (ಇನ್ನೂ ನಗೆಯಿಂದಲೆ) ನಮ್ಮನೀ ಏನ್ಮಾಡ್ತೀ ತೊಗೊಂಡು? ಧಡ್ಡ ರಂಡೇಗಂಡ! ದುಡಿದು ಹೊಟ್ಟೆ ತುಂಬಿಕೊಳ್ಳ್ವವ ನೀನು, ಹೊಟ್ಟೆ ತುಂಬಿಕೊಂಡು ದುಡಿವವ ನಾನು.... (ಹಳ್ಳಿಗನು ಕೂಡುತ್ತಿರುವದನ್ನು ನೋಡಿ) ಏ—ಕೂಡ್ಬೇಡ, ನಡೆ—ಏಳು.

**ಹಳ್ಳಿಗ** :— (ಎಚ್ಚರವಿಲ್ಲದವನಂತೆ, ಶಬ್ದಗಳು ತಾವಾಗಿಯೆ ಹೊರಬೀಳುತ್ತಿರುವ-ವೇನೊ ಎಂಬಂತೆ) ಏನೊ ಕೆಟ್ಟವಾಸ್ನೆ ಐತ್ರಿ.

**ತಮಣಾಚಾರಿ** :— (ತಿಳಿಯದೆ) ಏನಂದಿ?

**ಹಳ್ಳಿಗ** :— (ಮೊದಲಿನಂತೆ) ಭಾಳ ದೂರೈತೇನ್ರಿ?

**ತಮಣಾಚಾರಿ** :— ನಡಿಯೊ, ಇಲ್ಲೀ ಅದ! (ನ. ರಾಯನಿಗೆ) ನೋಡಿದಿರಾ ಬ್ರಾಹ್ಮಣ ಧರ್ಮ! (ಎನ್ನುತ್ತ ಹೊರಡುವನು.)

**ಹಳ್ಳಿಗ** :— (ಮೊದಲಿನಂತೆಯೆ) ಗಟಾರದ ವಾಸ್ನಿ ಐತಿ....ದೂರೈತೊ ಏನೊ?....ಗ–ಟಾ–ರ....ದೂರ–....ವಾ–ಸ್ನಿ—

[ಎಂಬ ಶಬ್ದಗಳು ಹೊರಬೀಳುತ್ತಿರುವಾಗ ತಲೆ ಹಿಡಿದುಕೊಂಡು, ಕಣ್ಣು ತೆರೆದಿಟ್ಟು, ಮೊಳಕಾಲ್ಗಳ ಮೇಲೆ ಮೊಳಕೈಗಳನ್ನಿಟ್ಟು ಕುಳಿತು ಕೊಳ್ಳುವನು. ತಮಣಾಚಾರಿ ಇವನನ್ನು ನೋಡದೆಯೆ ಒಂದೆರಡು ಹೆಜ್ಜೆ ತಾನು ಬಂದ ಬದಿಗೆ ನಡೆದಿರುವನು. ತಮಣಾಚಾರಿ ಹೊರಟಿದ್ದು ಹಳ್ಳಿಗನ ಲಕ್ಷ್ಯಕ್ಕೆ ಬಂದಿಲ್ಲ.]

**ನರಸಿಂಗರಾಯ** :— (ಪರಿಸ್ಥಿತಿಯನ್ನು ಕಂಡು, ಹಳ್ಳಿಗನಿಗೆ) ಏ, ನಡೀ ಅಂತಾರ, ಹೋಗೂ ಅವರ್ಬೆನ್ನಿಡಿದು! (ಉತ್ತರವಿಲ್ಲ) ಏ—ತೊಗೊ, ಹಿಡಿ ನಿನ್ನ ಆಯುಧ, ಭಿಕ್ಷೆಯ ಭಾರ್ಗವ ನೀನು! (ಸಲಿಕೆಯನ್ನು ಕೊಡಲು ಹಳ್ಳಿಗನು

ಕ್ಕೆಯನ್ನು ಕೂಡ ಮುಂದೆ ಚಾಚುವುದಿಲ್ಲ. ಕನಲಿ) ಥೂ! (ತಮಣಾಚಾರಿ ಈಗ ತಿರುಗಿ ನಿಲ್ಲುವನು) ಇದೇನ್ಸ್ವಂತು ಪೀಡಾ?—ಹಿಂದಿನ ಜನ್ಮದಾಗ ಸಾಕಿದ ಕರಡಿ ಆಗಿದ್ದಿಯೇನೊ, ನನೀ ಮುಂದ ಧರಣೇ ಕೂಡ್ಲಿಕ್ಕೆ? (ಉತ್ತರವೆ ಇಲ್ಲ. ತಮಣಾಚಾರಿ ಇದೇನು ಗೂಢವೆಂದು ಮೆಲ್ಲಗೆ ನಡೆದು ಹತ್ತಿರ ಬರುವನು. ಇನ್ನೂ ಉತ್ತರವಿಲ್ಲದ್ದಕ್ಕೆ—ಗದ್ದರಿಸುತ್ತ) ಏ—ಏಳ್ತಿಯೊ —ಏನು ಕಾಲ್ಮುರಿದು ಕೈಯಾಗ ಕೊಡಲಿಯೊ? (ಹಳ್ಳಿಗನು ಯಾವವೂ ವಿಕಾರವಿಲ್ಲದೆ ಒಂದೇ ಸವನೆ ತೆರೆದ ಕಣ್ಣುಗಳಿಂದ ತನ್ನನ್ನು ನೋಡಲು-ಅವನ ಮುಖದ ಹತ್ತಿರಕ್ಕೆ ಮುಖವನ್ನೊಯ್ದು) ಏ-(ಎಂದು ಗದ್ದರಿಸಬೇಕೆನ್ನು ವಷ್ಟರಲ್ಲಿ ಒಮ್ಮೆಲೆ 'ಅಯ್ಯೊ' ಎಂದು ಚೀರಿ ಹಿಂದೆ ಸರಿಯುವನು. ಕೂಡಲೆ 'ನರ್ಸಿಂಗ್ರಾಯ್ರು' ಎಂದು ತಮಣಾಚಾರಿ ಧಾವಿಸಿ ಅವನನ್ನು ಹಿಡಿಯು ವನು.)

[ಈ ಸದ್ದಿಗೆ ಮನೆಯ ಬಾಗಿಲಿಗೆ ಮನೆಯ ಯಜಮಾನಿತಿ—ನರಸಿಂಗ ರಾಯನ ಹೆಂಡತಿ—ಬಂದು ನಿಲ್ಲುವಳು. ಇಡಿಯ ದಿವಸದ—ಇಡಿಯ ಆಯುಷ್ಯದ—ಅಖಂಡ ದುಡಿತದ ದಣಿವಿನ ಕಳೆ ಮುಖದಲ್ಲಿ. "ದುಡಿ. ವವರ ದಣಿವು ನಾನು" ಎಂದು ವಿಶ್ವರೂಪಧಾರಿ ಶ್ರೀಕೃಷ್ಣನಿಗೆ ಹೇಳು-ವಂತಹ ಯೋಗ್ಯತೆ ಅವಳಲ್ಲಿದೆ. ಆದರೂ ಮುಖದಲ್ಲಿ ಸಮಾಧಾನವು ಉಸಿರಿನಂತಿದೆ. ಬಂದು ಒಂದು ನಿಮಿಷ ಇಡಿಯ ದೃಶ್ಯವನ್ನು ನೋಡಿ, ಮೆಲ್ಲಗೆ ಕೆಳಗೆ ನಡೆದೇ ಬರುವಳು. ಆಗ ಅವಳತ್ತ ತಮಣಾಚಾರಿಯ ಲಕ್ಷ್ಯ ಹೋಗಿ ಅವನು ಸೌಜನ್ಯಕ್ಕೆಂದು ಹಲ್ಲು ಕಿರಿಯುವನು. ಹೆಂಡತಿ ಬಂದುದು ನರಸಿಂಗರಾಯನ ಲಕ್ಷ್ಯಕ್ಕೆ ಈಗ ಬರುವುದು. ಕೂಡಲೆ ಅಧಿಕಾರದ ಗಂಡತನದ ಠೀವಿಯಲ್ಲಿ ಸೆಲ್ಲಲೆತ್ತಿಸುವನು. ಅಷ್ಟರಲ್ಲಿ—]

**ಹೆಂಡತಿ** :— ಏನಾದ್ರೂ ನಡೆದಿದೆಯೆ ಇಲ್ಲಿ?

**ನರಸಿಂಗರಾಯ** :— ರಾಕ್ಷಸ! ಭೂತ! ಅವನ ಕಣ್ಣೊಳಗೆ ನೋಡ್ರಿ, ತಮಣಾಚಾರ್ರೆ—

**ಹೆಂಡತಿ** :— (ಹಳ್ಳಿಗನನ್ನು ನೋಡುತ್ತ) ಅಯ್ಯ! ಪೆಟ್ಟಗಿಟ್ಟ ಹತ್ತೇದೇನು ಇವನಿಗೆ? (ಸಮೀಪ ಬಂದು ನೋಡಿ) ತಮಣಾಚಾರ್ರ, ಮಲರೋಗದ ಲಕ್ಷಣೇನು?

**ನರಸಿಂಗರಾಯ** :— (ಒಮ್ಮೆಲೆ) ಏ-ಏ-ಏ ನೀ ಹೋಗ್ಬೇಡ ಅವನ ಹತ್ತಿರ-ನೋಡ್ಬೇಡ—

**ಹೆಂಡತಿ**:— (ತಡೆಯುತ) ನಿಂದರ್ರ್ಯಾರ್ದಿ ಸುಮ್ನ! ಎಲ್ಲಿ ಹೋದ್ರೂ ಹುಡುಗ ರ್‍ಹಾಂಗೇ ಮಾಡ್ತೀರಿ.

**ತಮಣಾಚಾರಿ**:—ಅಲ್ಲ—ಯಾವ ಜಾತಿಯೊ—ಯಾವ ರೋಗನೋ! ಅದಕ್ಕೊಂದಿಷ್ಟು ದೂರಿರ್ರಿ ಅಂತ—

**ಹೆಂಡತಿ**:—(ಹಳ್ಳಿಗನನ್ನು ದಿಟ್ಟಿಸಿ ನೋಡಿ) ಅಯ್ಯ! ಇದರ ಸುಡ್ಲಿ! ಎಲ್ಲಿಂದ್ಲೋ ಹಸಿದು ಬಂದದ! ನೋಡ್ಬ್ಯಾರ್ದ, ತಮಣಾಚಾರ್ರ, ಯಾವ ರೋಗಾನೂ ಇಲ್ಲ! ಕಣ್ತಗದು ನಿದ್ದಿ ಹತ್ತಿದವರ್ಹಾಂಗ ಕೂತದ! ಪಾಪ!

**ತಮಣಾಚಾರಿ**— ಇದು ನೋಡ್ರಿ ತಾಯಿ. ಅವನ ವ್ಯವಸ್ಥಾ ನಾವು ನೋಡ್ತೀವಿ. ಮತ್ತ ಜನ ಸೇರ್‍ಲಿ, ಪೋಲೀಸ್ರೇ ಬರ್‍ಲಿ, ಪಂಚನಾಮೇನೆ ಆಗ್ಲಿ, ನೀವು ಬ್ಯಾಡ ಆ ಗದ್ದಲದಾಗ—

**ಹೆಂಡತಿ**:— (ತಿರಸ್ಕಾರದಿಂದ) ಹಸಿದು ಬಂದದ ಅಂದ್ರ ಪೋಲೀಸ್ರು ಅಂತ! ಬ್ರಾಹ್ಮಣರ ಮನೀ ಮುಂದ ಹಸಿದ ಹೆಣ ಸಾಯ್ಬೇಕೂ ಅಂತೀರೇನು?

**ನರಸಿಂಗರಾಯ**:— (ಗಾಬರಿಗೊಂಡು) ಅಂದ್ರಂದ್ರ? ಅಂದ್ರೇನಂತೀ ನೀನು? ಎತ್ತಿ ಒಯ್ದು ಮುಂದಿಯ ಮನೀ ಮುಂದ ಇಡು ಅಂತೀಯೊ ಏನು?

**ಹೆಂಡತಿ**:— ಸುಟ್ಟಿತು ನಿಂ ಗಂಡಸ್ರ ಬುದ್ಧಿ! (ತಮಣಾಚಾರಿಗೆ) ಅವನ್ನಿಷ್ಟು ಇತ್ತತ್ತ ಸರಿಸಿ ಹೀಂಗ ಇಲ್ಲಿ ಪಾವಟಿಗೆಗೆ ಬೆನ್ನು ಆನಿಸಿ ಕೂಡಿಸ್ರಿ. ನೋಡೋಣ (ಎಂದು ಲಗುಬಗೆಯಿಂದ ಒಳಗೆ ಹೊರಟು ಬಾಗಿಲಿನಲ್ಲಿ ತಿರುಗಿ ನಿಂತು) ನಾನು ಮಜ್ಜಿಗೆ ಆಗಲಿ, ನೀರಾಗಲಿ ತರ್‍ತೀನಿ(ಒಳಗೆ ಹೋಗುವಳು)

[ನರಸಿಂಗರಾಯ, ತಮಣಾಚಾರಿ ಒಬ್ಬರನ್ನೊಬ್ಬರು ನೋಡುವರು.]

**ನರಸಿಂಗರಾಯ**:— ಬರ್ರಿನ್ನು ಮುಂದೆ....ಈ ಕೋಣನ ಜೋಡಿ ಹೆಗಲಿಗೆ ಹೆಗಲು ಹಚ್ಚೋಣ. (ಇಬ್ಬರೂ ಬಂದು ಅವನನ್ನು ಕಂಕುಳದಲ್ಲಿ ಕೈ ಹಾಕಿ ಎತ್ತಲು ಬಾಗಿದಾಗ ನರಸಿಂಗರಾಯ ತ. ಗೆ) ಮತ್ತ ಈ ಗದ್ದಲದಾಗ ರಾಯರ ಮನೀ ವಳಗ ಕೇಳ್ಲಿಕ್ಕೆ ಮರ್‍ತೀರಾ?

[ಎಂದು ಇಬ್ಬರೂ ಬಾಗುವಷ್ಟರಲ್ಲಿ (ಪ್ರೇಕ್ಷಕರ) ಬಲಬದಿಯಿಂದ ಸೈಕಲ್ಲಿನ ಗಂಟೆಯ ಸದ್ದು ಕೇಳುವುದು. ತ. ಯ. ತಟ್ಟನೆ ಸರಿದು ನಿಲ್ಲುವನು. ನರಸಿಂಗರಾಯನು ಬೆದರಿದವನಂತೆ 'ಏನದು ಬಾರಿಸಿದ್ದು' ಎಂದು

ಟಣ್ಣನೆ ದೂರ ಜಿಗಿಯುವನು. ಇಷ್ಟರಲ್ಲಿ ಒಂದೆರಡು ಸಲ ಗಂಟೆಯು ಸದ್ದಾಗಿ ಬಲಬದಿಯಿಂದ ಅದೇ ಸೈಕಲ್ಲಿನಿಂದ ಇಳಿಯುತ್ತ ಡಾಕ್ಟರನು ಬರುವನು.]

**ನರಸಿಂಗರಾಯ** :—( ಗಾಬರಿಯ ದನಿಯಲ್ಲಿ ) ಅಯ್ಯಯ್ಯೊ ! ಡಾಕ್ಟರ !

**ತಮಣಾಚಾರಿ** :— (ಡಾಕ್ಟರನಿಗೆ) ಮತ್ತೇನೂ ಇಲ್ಲ. ಇದು ಯಾವನೋ ಮಾತಾಡ್ತಾ ಮಾತಾಡ್ತಾ ಹೀಂಗೇ ಕೂತುಬಿಟ್ಟಾನ, ಏನಾಗೇದ—

**ಡಾಕ್ಟರ**:— (ಲಗುಬಗೆಯಿಂದ ಸೈಕಲನ್ನು ಅಲ್ಲಿಯೆ ಬಿಸುಟ ಬಂದು ಮೊಳಕಾಲೂರಿ, ಹಳ್ಳಿಗನ ಕೈಯನ್ನೂ ಎದೆಯನ್ನೂ ಕಣ್ಣುಗಳನ್ನೂ ನೋಡಿ—ಮೆಲ್ಲಗೆ ಎದ್ದು) ಇನ್ನೂ ಜೀವ ಇದೆ (ಎನ್ನುತ್ತ ಏನನ್ನೋ ಹುಡುಕುವವನಂತೆ ತನ್ನ ಕಿಸೆಗಳನ್ನು ಕೈಯಿಂದ ತಟ್ಟಿ ನೋಡತೊಡಗುವನು.)

**ನರಸಿಂಗರಾಯ** :— (ಆಶ್ಚರ್ಯದಿಂದ) ಅಲ್ಲ—ಡಾಕ್ಟೆರ್—ಅವನ ಕಣ್ಣೊಳಗ ಏನೇನೇನೋ ಕಾಣಿಸಿಧಾಂಗ ಆಗ್ತದಲ್ಲ—?

**ಡಾಕ್ಟರ** :— (ಆಶ್ಚರ್ಯದಿಂದ) ಕಣ್ಣೊಳಗ? ಛೆ! ಛೆ! ಸ್ವಚ್ಛ ಅವೆ ಕಣ್ಣು ನೋಡುವಾಗ ನಿಮ್ಮದೇ ಪ್ರತಿಬಿಂಬ ಕಾಣಿಸಿರಬೇಕು—( ಮತ್ತೆ ಕಿಸೆಗಳನ್ನು ತಟ್ಟುವನು.)

**ತಮಣಾಚಾರಿ** : — ಆಗ್ಲಿ. ಹಾಂಗಾದ್ರ....ಇನ್ನೂ ಬಹಳ ಕೆಲ್ಸ ಇದೆ ನನ್ಗೆ ....(ಸುಳ್ಳು ನಗೆಯಿಂದ) ಇನ್ನೇನು ಡಾಕ್ಟರ್ರೆ ಬಂದ್ರಲ್ಲ? (ಹೊರಡುವನು)

**ನರಸಿಂಗರಾಯ** :— ತಮಣಾಚಾರ್ರ, ಒಂದಿಷ್ಟು ಅತ್ತಾತ್ತ ಸರಿಸೋಣ ಇವನ್ನ—(ತ. ಆಚ ತಿರುಗಲು) ಇಲ್ಲಾ ಅಂದ್ರ ಹೋಗ್ರಿ ನೀವು— ಅದನ್ನೂ ಇಷ್ಟು ಕೇಳ್ಲಿಕ್ಕೆ ಮರೀಬ್ಯಾಡಿರಿ—

**ಡಾಕ್ಟರ** :— ಆಚಾರ್ರೆ ...ತಡೀರಿ ಒಂದು ತುಸು....( ವಿಚಾರ ಮಾಡುತ್ತ ) ಯಾಕಂದ್ರೆ, ಸದ್ಯಕ್ಕೇನೋ ಇವನ ಜೀವ ಇದೆ, ಆದ್ರೆ ಎಷ್ಟೊತ್ತಿದ್ದೀತು ಹೇಳ್ಲಿಕ್ಕೆ ಬರೋದಿಲ್ಲ—ನಾನು ತಟ್ಟನೆ ಸೈಕಲ್ ಹತ್ತಿಕೊಂಡು ಹೋಗಿ ಔಷಧ ತರ್ತೀನಿ—

**ಹೆಂಡತಿ** :— (ಬಂದು) ಅಯ್ಯೊ! ಇನ್ನೂ ಇಲ್ಲೇ ನಿಂತಿರಾ? ಹಿತ್ತಲದ ಓಣೀ ಮನೆಯಿಂದ ಮಜ್ಜಿಗೆ ತಂದೆ—(ಡಾಕ್ಟರನನ್ನು ನೋಡಿ ತಡೆಯುವಳು).

**ಡಾಕ್ಟರ** :— (ನಸುಗೆಯಿಂದ) ತಾಯೀ, ಮಜ್ಜಿಗೆಯಿಂದ ಏನುಪಯೋಗ? ಅವನಿಗೆ ಯಾವ ರೋಗ ಅದನೊ?

**ಹೆಂಡತಿ**: – ರೋಗ ಇಲ್ಲ, ರುಜೆ ಇಲ್ಲ. ಕಾಣಿಸೋದಿಲ್ಲೇನ್ರಿ, ಡಾಕ್ಟರ್ರೆ? ಹಸಿದು ನಿತ್ರಾಣ ಆಗೇದ ಖೋಡಿ—(ತಮಣಾಚಾರಿಗೆ) ನೀವು ಒಂದಿಷ್ಟು ತುಟಿ ಬಿಡಿಸರಿ –

**ಡಾಕ್ಟರ**:— ಅಲ್ಲ—ತಡೀರಿ—ಒಂದು ಮಾಡ್ಲಿಕ್ಕೆ ಹೋಗಿ ಒಂದಾದೀತು—

**ನರಸಿಂಗರಾಯ**: –(ತಿಳುಹಿಸುವವನಂತೆ) ಹಾಂ— ಮತ್ತೆ! ಡಾಕ್ಟರಗಿಂತ ನಿನ್ಗ ಹೆಚ್ಚು ತಿಳಿತದೇನು?

**ತಮಣಾಚಾರಿ**:— ಇಲ್ಲ—ಕೂಳಿಲ್ದಕ್ಕೇ ಹೀಂಗ ಆಗಿರ್ಬೇಕೂ ಅಂತ ನನ್ಗೂ–

**ಹೆಂಡತಿ**:— (ನಡುವೆಯೆ) ಯಾಕ್ರೀ, ತಮಣಾಚಾರ್ರ? ಹೌದಲ್ಲೊ?

**ಡಾಕ್ಟರ**: — ಅದರಿಂದ ಜೀವಕ್ಕೇನಾದರೂ ಅಪಾಯ ಆದೀತೂಂತ—

**ಹೆಂಡತಿ**:— (ಅವನ ಮಾತಿಗೆ ಲಕ್ಷ್ಯಗೊಡದೆ ತಮಣಾಚಾರಿಗೆ ಮತ್ತು ಗಂಡನಿಗೆ) ಹಿಡೀತೀರ್ರ್ಯೋ ಇಲ್ಲೊ ನೀವು ಅವನ್ನ? ಹಾಂಗೂ ಸಾಯ್ತಾದ, ಹೀಂಗೂ ಸಾಯ್ತಾದ ಅಂತಿದ್ರ ಒಂದ್ಹನಿ ಮಜ್ಜಿಗೆ ಆದ್ರೂ ಬೀಳ್ಲಿ ಗಂಟಲೊಳಗ....ಅದೂ ಆಕಳ (ಹಸು) ಹಾಲಿನ ಮಜ್ಜಿಗೆ....

**ತಮಣಾಚಾರಿ**:— (ಮುಂದಾಗುತ್ತ) ದೇವರೇ, ಅವನ ಆಯುಷ್ಯ ಮುಗಿದಿದೆ ಅಂದ್ರ—

**ಹೆಂಡತಿ**:— (ಕೆರಳಿ) ಹಿಡೀರಿ ಅಂದ್ರ ಅವನ್ನೆತ್ತಿ....! ಒಬ್ರು ದೇವ್ರಂತ, ಒಬ್ರು ಡಾಕ್ಟರ್ರಂತ—ಮಾತಾಡೇ ಕೊಲ್ಲಬೇಕಂತೀರೇನು ಅವನ್ನ?

**ಡಾಕ್ಟರ**:— ನಿಮ್ದು ಅಷ್ಟೊಂದು ಹಟ ಇದ್ರೆ ನಾನೇ ಮುಂದಾಗ್ತೀನಿ— (ಎಂದು ಬಂದು ವೀರಾಸನದಿಂದ ಕುಳಿತು, ಮೆಲ್ಲಗೆ ಎತ್ತರದ ಮೊಳಕಾಲಿಗೆ ಹಳ್ಳಿಗನ ತಲೆಯನ್ನು ಆನಿಸಿ, ತುಟಿ ಬಿಡಿಸುವನು ...ಮಜ್ಜಿಗೆಯ ಹನಿ ಬೀಳಲು ಹಳ್ಳಿಗನ ಬಾಯಿಯಿಂದ 'ಘುಟುಕ್' ಎಂದು ಸದ್ದಾಗಿ ಅವನ ನ್ಯೆ ಚಳಿಯಿಂದ ನಡುಗುವಂತೆ ಒಮ್ಮೆಲೆ ನಡುಗುವುದು.)

[ಕೆಲಹೊತ್ತು ಯಾರೂ ಮಾತನಾಡುವುದಿಲ್ಲ. ಡಾಕ್ಟರನು ಮೆಲ್ಲಗೆ ತನ್ನ ಕಾಲನ್ನು ಸರಿಸಿಕೊಂಡು, ಹಳ್ಳಿಗನನ್ನು ನೆಲಕ್ಕೆ ಮಲಗಿಸಿ, ಸದ್ದು ಮಾಡದೆ ಏಳುವನು. ಮಿಕ್ಕ ಮುವ್ವರೂ ದಂಗುಬಡೆದವರಂತೆ, ಕಲ್ಲುಬೊಂಬೆಗಳಂತೆ ನಿಂತಿರುವರು. ಡಾಕ್ಟರನು ನಡೆದು ತನ್ನ ಸೈಕಲ್ಲನ್ನು ಸದ್ದಿಲ್ಲದೆ ಎತ್ತಿ, ಅದನ್ನು ಬಂದ ಹಾದಿಗೆ ತಿರುಗಿಸಿ, ಒಂದು ಕಾಲನ್ನು ಪೆಡಲ್‌ದ ಮೇಲಿಟ್ಟು ಎಲ್ಲರನ್ನೂ ನೋಡುವನು. ಎಲ್ಲರೂ ಗಾಬರಿಗೊಂಡವರಂತೆ ನಿಂತುದನ್ನು ಕಂಡು ಮುಗುಳ್ನಗೆಯಿಂದ]

**ಡಾಕ್ಟರ:—** (ಹೆಂಡತಿಗೆ) ತಾಯೀ, ನಿಂ ಪುಣ್ಯದಿಂದ— ಉಳಿದುಕೊಂಡ ಈ ಬೀದಿಯ ಭೂತ....ಇಲ್ಲೇ ನಿಂತಿರ್ರಿ, ಒಂದು ನಿಮಿಷದಲ್ಲಿ ಚೇತರಿಸುವ ಔಷಧ ತಂದೆ (ಸೈಕಲ್ಲನ್ನು ಹತ್ತಿ ಹೋಗುವನು.)

**ತಮಣಾಚಾರಿ:—** ಅದೇ—ನಾ—ಹೇಳ್ಳಿಲ್ಲ—?

**ನರಸಿಂಗರಾಯ:—** (ಸಿಡುಕಿನಿಂದ) ಉಳಿದನಂತೆ! ಅವನಿಗೇನು ಧಾಡಿ? ಒಂದ್ಹನಿ ಮಜ್ಜಿಗೆಗಾಗಿ ಈ ಮೋಸದ ನಾಟಕ ಮಾಡಿದ!

**ಹೆಂಡತಿ:—** (ಬಿದ್ದುಕೊಂಡ ಹಳ್ಳಿಗನನ್ನು ನೋಡುತ್ತ) ಯಾಕ ಉಳೀತೋ ಖೋಡಿ? ಗತಿಗೇಡಿ!

[ಮಿಕ್ಕ ಇಬ್ಬರೂ ಅವಳನ್ನು ಆಶ್ಚರ್ಯದಿಂದ ನೋಡುವಾಗ, ಸೈಕಲ್ಲಿನ ಗಂಟೆ, ಅದೇ ವೇಳೆಗೆ—]

(ತೆರೆ.)

## ಪಾತ್ರಗಳು

ಬ್ರಹ್ಮಯ್ಯ ಕಂಟ್ರೋಲ್‌ದಾರ

ವಿಷ್ಣುಪಂತ ಶಮಾಲದಾರ

ರುದ್ರಪ್ಪ ಖಲಾಸ್‌ದಾರ

ಆರುಮೊಗ ಸ್ಟಾಕಿಲ್ದಾರ

ಯಮಪ್ಪಣ್ಣ ಹೆಗಲ್ದಾರ

ನಿರಾಧಾರಜಿ ಬಾತ್ಮೀದಾರ ('ಖಂಡತುಂಡ' ಪತ್ರದ)

[ ಮೊದಲಿನ ಐದು ಪಾತ್ರಗಳ ವಯಸ್ಸು-ವೇಷಗಳನ್ನು ಕಲ್ಪಿಸುವಾಗ, ಬ್ರಹ್ಮ-ವಿಷ್ಣು-ರುದ್ರ-ಷಣ್ಮುಖ-ಯಮ ಈ ಚಿತ್ರಗಳನ್ನು ನೆನೆದುಕೊಳ್ಳಬೇಕು. ]

## ರಂಗಸೂಚಿಕೆ

[ಬ್ರಹ್ಮಯ್ಯ ಕಂಟ್ರೋಲ್‌ದಾರನ ಕಚೇರಿ. ರಂಗಸ್ಥಲದ ಮಧ್ಯದಲ್ಲಿ ಒಂದು ಟೇಬಲ್ಲು. ಅದರ ಹಿಂದೆ ಒಂದು ಕುರ್ಚಿ. ಟೇಬಲ್ಲಿನ ಮೇಲೆ ಎಷ್ಟೋ ಕಾಗದಗಳು ಚೆಲ್ಲಾಪಿಲ್ಲಿಯಾಗಿ ಹರಡಿವೆ. ಗುಡ್ಡಗಟ್ಟಿ ನಿಂತಿವೆ. ಹಿಂದಿನ ಕುರ್ಚಿಯಲ್ಲಿ ಬ್ರಹ್ಮಯ್ಯನು ಕುಳಿತಿದ್ದಾನೆ. ಹೊಟ್ಟೆತುಂಬ ಊಟವಾಗಿದೆ, ತುಟಿ ತಾಂಬೂಲದಿಂದ ಕೆಂಪಾಗಿವೆ, ಬಾಯಿ ನಿದ್ದೆಯಿಂದ ಅರ್ಧ ತೆರೆದಿದೆ, ಒಂದು ಕಾಲು ಟೇಬಲ್ಲಿನ ಮೇಲೆ–ಇನ್ನೊಂದು ನೆಲದಿಂದ ತುಸು ಎತ್ತರದಲ್ಲಿ: ನಿದ್ರೆಯ ರಭಸ ಆಗಾಗ ಒತ್ತಿಬರುವ ಗೊರಕೆಯ ದನಿಯಿಂದ ಕಂಡುಬರುವುದು. ಮಲಗಿದ ಬ್ರಹ್ಮಯ್ಯನ ಬಲಬದಿಗೆ, ಟೇಬಲಿನ ಒಂದು ದಂಡೆಗೆ ಇನ್ನೊಂದು ಕುರ್ಚಿ ಇದೆ. ಅದರಲ್ಲಿ ನಿರಾಧಾರಜಿ ಕುಳಿತಿದ್ದಾನೆ. ಕೈಯಲ್ಲಿ ಪೆನ್ಸಿಲ್, ಎಡಗೈಯಲ್ಲಿ ನೋಟ-ಬುಕ್ಕು. ಹೊತ್ತು ಹೋಗದ್ದಕ್ಕೂ ಬ್ರಹ್ಮಯ್ಯನ ನಿದ್ರೆಗಾಗಿ ಕನಲಿದ್ದಕ್ಕೂ ನಿರಾಧಾರಜಿಯ ಹುಬ್ಬು ಗಂಟುಗಟ್ಟಿವೆ. ಪೆನ್ಸಿಲಿನಿಂದ ನೋಟಬುಕ್ಕನ್ನು ಬಡಿಯುವನು; ಪೆನ್ಸಿಲಿನ ಹಿಂದುದಿಯನ್ನು ಹಲ್ಲುಸಾಲಿಗೆ ಬಡಿದುಕೊಳ್ಳು-ವನು. ಇಷ್ಟರಲ್ಲಿ ಹೊರಗೆ ಸಮೀಪದಲ್ಲಿ, ಒಂದು ದೊಡ್ಡ ಜಾಗಟೆಯ ಮೇಲೆ ಎರಡು ಹೊಡೆದ ಸದ್ದು ಕೇಳಬರುವುದು. ಆ ಜಾಗಟೆಯ ಸದ್ದಿಗೆ ಬ್ರಹ್ಮಯ್ಯನ ಗೊರಕೆ ಗೆರಸೊಪ್ಪೆಯ ರಭಸದಿಂದ ಸಿಡಿದು ಹೊರಬಿದ್ದು, ತುಂತುರುಹನಿಗಳ ಮಂಜಿನಂತೆ ಕಣ್ದೆರೆದು ಅತ್ತಿತ್ತ ನೋಡುವನು. ಕಣ್ಣೊರಸಿಕೊಂಡು, ಟೇಬಲಿನಿಂದ ಕಾಲನ್ನಿಳಿಸಿ, ಸರಿಯಾಗಿ ಕುಳಿತುಕೊಳ್ಳುತ್ತ ನಿರಾಧಾರಜಿಯನ್ನು ನೋಡುತ್ತ—]

**ಬ್ರಹ್ಮಯ್ಯ** :— ಯಾರು ನೀವು ?

**ನಿರಾಧಾರಜಿ** :— (ಎದ್ದು ನಿಲ್ಲುತ್ತ) ನಾನೊಬ್ಬ ಬಾತ್ಮೀದಾರ—

**ಬ್ರಹ್ಮಯ್ಯ** :— (ಸಂಶಯದೃಷ್ಟಿಯಿಂದ ನೋಡುತ್ತ) ಬಾತ್ಮೀದಾರ ಅಂದ್ರೆ ? ಇಲ್ಲೇನು ಬೇಕಾಗೇದ ನಿನ್ಗ ?

ನಿರಾಧಾರಜಿ:— ಕಂಟ್ರೋಲ್‌ದಾರ ಬ್ರಹ್ಮಯ್ಯನವರನ್ನ ನೋಡ-ಬೇಕಾಗೇದ....

ಬ್ರಹ್ಮಯ್ಯ:— (ಸಂತೋಷ-ಹೆಮ್ಮೆಗಳ ನಗೆಯಿಂದ) ನಾ ನೇ ಬ್ರಹ್ಮಯ್ಯ ಕಂಟ್ರೋಲ್‌ದಾರ—

ಬಾತ್ಮೀದಾರ:— (ಒಮ್ಮೆಲೆ ನೋಟುಬುಕ್ಕಿನಲ್ಲಿ ಟಿಪ್ಪಣಿ ಮಾಡಿಕೊಳ್ಳುತ್ತ) ನೀವೆ? (ಆಶ್ಚರ್ಯದಿಂದ) ನೀವೆ! ನನ್ನ ಹೆಸರು ನಿರಾಧಾರಜಿ.... 'ಖಂಡತುಂಡ-ಪತ್ರದ ಬಾತ್ಮೀದಾರ ನಾ....ತಮ್ಮದು ಪೂರಾ I. C. S. ಕಚೇರಿ ಅಂತ ಪ್ರಕಟ ಆಗಿದ್ದು ನೋಡಿ, ಎಲ್ಲಾ ಜನ I. C. S. ಇದ್ದ ಕಚೇರಿ ಹ್ಯಾಂಗ ಇರ್ತದ ಅನ್ನೋ ನಮ್ಮ ವಾಚಕರ ಕುತೂಹಲ—

ಬ್ರಹ್ಮಯ್ಯ:— (ನಡುನೆಯೆ ಬೊಳ್ಳಿಂದು ನಕ್ಕು) I. C. S. I. ಹಹಹ! ಹಹಹ! ಹಾಯ್, ಶೀಹೆಸ್ ಹಹಹ! (ಬಾತ್ಮೀದಾರನು ಬೆದರಿದವನಂತೆ ತನ್ನನ್ನು ನೋಡುವುದನ್ನು ಕಂಡು, ನಗೆ ತಡೆಯುತ್ತ) I. C. — I. C. S. ಅಂದ್ರೆ—ಹಹ!– ಆ I. C. S. ಅಲ್ಲ ಇದು – ಈ I. C. S. ಉ Inner Control Service ಉ [ಇನರ್ ಕಂಟ್ರೋಲ್ (ಆತ್ಮನಿಯಂತ್ರಣ) ಸರ್ವಿಸು]

ನಿರಾಧಾರಜಿ:— (ಚಕಿತನಾಗಿ) Inner Con—(ಒಮ್ಮೆಲೆ) ಅಂದ್ರೆ? ಅಂದ್ರೆ ಏನಿದು?

ಬ್ರಹ್ಮಯ್ಯ:— (ಗಾಂಭೀರ್ಯದಿಂದ) ಏನದು? (ಕುರ್ಚಿಯಿಂದ ಏಳುತ್ತ) ನಂ ಜನರಿಗೆ ತಿಳುಹಿಸಿ ಅದರ ಪ್ರಚಾರ ಮಾಡಬೇಕೆಂತಲೇ ಈ ಕಚೇರಿ ಪ್ರಾರಂಭಿಸಿದ್ದು........ (ದೂರದ ಬದಿಗೆ ಸರಿದು, ಬಾತ್ಮೀದಾರನನ್ನು ದಿಟ್ಟಿಸಿ) ಏನದು? ಹೇಳ್ತೀನಿ ಬರೆದುಕೋರಿ ನಿಂ ಪೇಪರಿಗಾಗಿ.... (ಬೆನ್ನಿಗೆ ಕೈ ಕಟ್ಟಿಕೊಂಡು ಮೆಲ್ಲಗೆ ಹೆಜ್ಜೆಗಳನ್ನಿಡುತ್ತಾ) ಇನರ್ ಕಂಟ್ರೋಲ್ ಸರ್ವಿಸು! ನಂ ಭಾರತೀಯ ಸಂಸ್ಕೃತಿಗೆ ಅಭಿಮಾನದ ಮಾತು.... ಬಾಹ್ಯ ವಿಷಯಗಳು ತುಚ್ಛ ನಮಗೆ. ಅವುಗಳ ನಿಯಂತ್ರಣದಿಂದ ಏನಾಗ್ಬೇಕಾಗಿದೆ?.... ಮುಖ್ಯವಾದುದು ಆತ್ಮ, ಒಳಗಿನದು, Inner—ಆದನ್ನ ಕಂಟ್ರೋಲ್ ಮಾಡುವುದೆ ನಿಜವಾದ ಕಂಟ್ರೋಲ್ ಅಂತ—(ತಡೆದು) ತಿಳೀತೋ ನಿಮ್ಗೆ? 'ಹೊರಗಿನ ಅನ್ನ ಬಿಟ್ಟು, ಒಳಗಿನ

ಹಸಿವೆ ಕಂಟ್ರೋಲ್ ಮಾಡಿರಿ' ಅಂತ ಪ್ರಚಾರ ಮಾಡೋ ಉದ್ದೇಶ-ದಿಂದ— (ಬಾತ್ಮೀದಾರನ ಹಿಂದೆ ರಂಗಸ್ಥಲದ ತುದಿಗೆ ಒಂದು ಮುಖ ಕಾಣುವುದು. ಅದನ್ನು ನೋಡಿ ತಡೆಯುವನು. ಇವನು ತಡೆದದ್ದು ನೋಡಿ ಆ ಮುಖವು ಮಾಯವಾಗಲು) —ಸಮಾಲ್‌ದಾರ್— (ಆ ಮುಖ ಮತ್ತೆ ಕಾಣಿಸುವುದು) ಏನ್ಬೇಕಾಗಿದೆ? (ಎಂದು ನಡೆದು ಬಂದು ತನ್ನ ಕುರ್ಚಿಯಲ್ಲಿ ಕುಳಿತು, ಬಾತ್ಮೀದಾರನಿಗೆ ಕೂಡಲೆ ಸನ್ನೆ ಮಾಡಿ, ಬಂದ ವ್ಯಕ್ತಿಯನ್ನು ಸನ್ನೆ-ಯಿಂದಲೆ ಮುಂದೆ ಕರೆಯುವನು. ಆ ವ್ಯಕ್ತಿ ಬಂದು ಬಾತ್ಮೀದಾರ ಮತ್ತು ಬ್ರಹ್ಮಯ್ಯನ ನಡುವೆ ನಿಂತ ಮೇಲೆ) ಏನ್ಬೇಕಾಗಿತ್ತು? (ಬಾತ್ಮೀದಾರ-ನಿಗೆ) ವಿಷ್ಣುಪಂತ ಸಮಾಲದಾರ ಇವರು-(ನಗೆಯಿಂದ) ನಿಮ್ಮ I. C. S. ಇವರು! (ವಿ. ಗೆ) ಇವರು ಭೂಡತುಂಡದ ಖಾತೇಮೀದಾರರು—

**ನಿರಾಧಾರಜಿ** :— (ವಿನಯದಿಂದ) 'ಖಂಡತುಂಡ'ದ ಬಾತ್ಮೀದಾರ—

**ಬ್ರಹ್ಮಯ್ಯ** :— (ಒಬ್ಬೊಬ್ಬರನ್ನೂ ಮಿಕಿ ಮಿಕಿ ನೋಡುತ್ತಿರುವ ವಿಷ್ಣುಪಂತನಿಗೆ, ಅಧಿಕಾರದ ದನಿಯಲ್ಲಿ) ಏನ್ಬೇಕಾಗಿತ್ತು—ಅಂದೆ.

**ವಿಷ್ಣುಪಂತ** :— (ಗಂಟಲನ್ನು ಸರಿಪಡಿಸಿಕೊಂಡು) ಎಲ್ಲಾ ಊರುಗಳಿಂದ ಕಾಳು-ಕಡಿ ತರೋ ವ್ಯವಸ್ಥೆ ಆಗೇದ... ಅದನ್ನೆಲ್ಲಿಡ್ಬೇಕು ಅಂತ—

**ಬ್ರಹ್ಮಯ್ಯ** :— (ಆಶ್ಚರ್ಯ ತೋರಿಸಿ) ಎಲ್ಲಿ ಅಂದ್ರೆ? ನಂ ಸರ್ವೀಸಿನ ರೂಲ್ಸ ಗೊತ್ತಿಲ್ಲೆ ನಿಮ್ಗೆ? ಎಲ್ಲಿ ಜನರ ಕಣ್ಣಿಗೆ ಬಿದ್ದು ಅವರ ಇನರ್ ಕಂಟ್ರೋಲ್ ನಷ್ಟವಾಗೋ ಹೆದರಿಕೆ ಇಲ್ಲ, ಅಲ್ಲಿ ಇಡತಕ್ಕದ್ದು ಅಂತ—

**ವಿಷ್ಣುಪಂತ** :— (ಎಲ್ಲ ತಿಳಿದವನಂತೆ) ಅದೇ-ಅದೇ.... ಅಂದ್ರ ನಂ ಕಚೇರಿಯ ಅಂಗಣದೊಳಗೇ ಒಗಿಸಿ ಬಿಟ್ರಾತು ಅಂತ ತಮಗ ಹೇಳ್ಲಿಕ್ಕೆ—ಅಂದ್ರ ಈಗ ಬಿಟ್ಟಿಸಿದ್ದು ತಮ್ಗ ತೋರಿಸ್ಲಿಕ್ಕೇಂತ—

**ಬ್ರಹ್ಮಯ್ಯ** :— (ತಲೆತೂಗಿ, ಒಮ್ಮೆಲೆ ಅಧಿಕಾರದ ದರ್ಪದ ದನಿಯಲ್ಲಿ) ಹಂ— ಮತ್ತೆ ವಿಷ್ಣ್ಣಾ—ಅದನ್ನ ಜೋಪಾನ ಮಾಡೋ ಕೆಲಸ—ಕೆಲಸೇನು? ಜವಾಬ್ದಾರಿ—ಪೂರಾ ನಿಂದು....ಅದು ನಿಂದೇ ಅಂತ ಬರೆಕೋತಾರ ನಮ್ಮ ಖಂಡಖಂಡದ ತಾತಮ್ಮಿದಾರರು—

**ನಿರಾಧಾರಜಿ** :— (ವಿನಯದಿಂದ) ಖಂಡತುಂಡದ ಬಾತ್ಮೀದಾರ—ನನ್ಹೆಸರು ನಿರಾಧಾರಜಿ....ಆ....ನಾನು ಒಂದೆರಡು ವಿಷಯ ಮಾಹಿತಿ ಕೇಳ್ಬಹು-ದೇನೊ ಅಂತ—ಅಂದ್ರ ತಮಗ ವ್ಯಾಳ್ಯಾ ಇದ್ರ— ಹಹ—

**ಬ್ರಹ್ಮಯ್ಯ** :— (ವಿಷ್ಣುಪಂತನಿಗೆ) ಅವರೇನು ಕೇಳ್ತಾರ ಹೇಳು....ನಾನು ಇವಕ್ಕೆಲ್ಲಾ ಸಹಿ ಮಾಡ್ತೀನಿ.... (ಎಂದು ಕಾಗದದ ಗುಡ್ಡಕ್ಕೆ ಕೈಸೇವೆ ಪ್ರಾರಂಭಿಸುವನು).

**ನಿರಾಧಾರಜಿ** :— (ವಿಷ್ಣುಪಂತನಿಗೆ) ತಂ ಹೆಸರು ವಿಷ್ಣುಪಂತ—

**ವಿಷ್ಣುಪಂತ** :— (ನಡುಪೆಯೆ) ನಾನು ಸಮಾಲ್‌ದಾರ....ಈ ಕಚೇರಿಯೊಳ್ಗ ನನ್ನ ಹೆಸರು ಸಮಾಲ್ದಾರ್—

**ನಿರಾಧಾರಜಿ**: —(ನಗೆಯಿಂದ) ಹುಂ.... ಅದೇ-ಅದೇ-ತಿಳೀತು ... ಮನೆಯ ಹೆಸ್ರು ಮನೀವೊಳ್ಗ, ಕಚೇರಿ ಹೆಸ್ರು ಕಚೇರಿವೊಳ್ಗ; ಇಲ್ದ ಗೊಂದಲ ಬ್ಯಾಡ ಅಂತ—ಹಹ!—ವಿಷ್-ಆಲ್-ಅಲ್ಲೀನ್ರಿ, ಸಮಾಲ್‌ದಾರ್ರಿ?

**ವಿಷ್ಣುಪಂತ** :— (ಗಾಂಭೀರ್ಯವನ್ನು ಬಿಡಬಾರದೆಂದು ಹಟದಿಂದ) ನಿವ್ಗೇನು ಕೇಳೋದದ ಕೇಳ್ರಿ—ಆದ್ರೆ (ಬ್ರಹ್ಮಯ್ಯನ ಎದುರು. ಗೋಡೆಯ—ಪ್ರೇಕ್ಷಕರ__ಮೇಲ್ಬದಿಗೆ ತೋರಿಸುತ್ತ) ಆದ್ರೆ—ಅಲ್ಲೇನು ಬರೆದಿದೆ ಅದನ್ನ ಲಕ್ಷದೊಳ್ಗಿಟ್ಕೊಂಡು ಕೇಳ್ರಿ,

**ನಿರಾಧಾರಜಿ** :—(ಆಕಡೆ ನೋಡುತ್ತ) ಅಲ್ಲೇನ್ಬರ್ದದೆ ಅದನ್ನ? (ಎನ್ನುತ್ತ ಮೇಲೆ ಮುಖ ಮಾಡಿ ಮುಂದೆ ನಡೆದು ಬಂದು) ಆರ್ಡ—(ಎಂದು ದಿಟ್ಟಿಸಿ ಲಕ್ಷ್ಯಗೊಟ್ಟು ಓದುತ್ತ) N-O- A-D-M-I-S-S-I-O-N without Permission! (ವಿಷ್ಣುಪಂತನನ್ನು ನೋಡುತ್ತ) ಇದೇನ್ರಿ, ಸಮಾಲ್ದಾರ್ರಿ? ಒಳಗ ಬರೋವವ್ರಿಗೆ ಕಾಣಿಸೋದ್ನ ಬಿಟ್ಟು, ಹೊರಗೆ ಹೋಗುವಾಗ ಕಾಣಿಸೋ ಹಾಂಗ ಬರೆದೀರಲ್ಲ? (ವಿ. ನು ತಲೆ ಅಲ್ಲಾಡಿಸಲು) ಅಲ್ಲೇನ್ರಿ? 'ಪರವಾನಿಗಿ ಇಲ್ದೆ ಒಳ್ಗ ಬರ್ಬಾರ್ದು' ಅಂತ—

**ವಿಷ್ಣುಪಂತ** :— ಈ ಕಚೇರಿವಳ್ಗ ಹಾಂಗಿಲ್ಲ ಅದರರ್ಥ....Admission ಅಂದ್ರ ಒಪ್ಕೊಳ್ಳೋದು ಅಂತರ್ಥ, 'ಮ್ಯಾಲಿನವರ ಪರವಾನಿಗಿ ಇಲ್ದೆ ತೆಳಗಿನವ್ರು ಯಾವ್ದನ್ನೂ ಒಪ್ಕೋ ಹಾಂಗಿಲ್ಲ' ಅಂತ ಅದರರ್ಥ—

**ನಿರಾಧಾರಜಿ** :— (ತಿಳಿಯದೆ) ಏನು ಒಪ್ಕೋಹಾಂಗಿಲ್ಲ ಅಂದಿರಿ?

**ವಿಷ್ಣುಪಂತ** :— (ಮಾತು ಹಾರಿಸುವ ಯತ್ನದಲ್ಲಿ) ಆದ್ಕೇ ಅದ್ನ ಲಕ್ಷದಾಗಿಟ್ಟು ಪ್ರಶ್ನೆ ಕೇಳಿರಿ ಅಂದೆ.

**ನಿರಾಧಾರಜಿ :**— (ಉತ್ತರ ದೊರೆಯದ್ದಕ್ಕೆ ಕೈಚೆಲ್ಲಿ) ನಾನ್ಕೇಳೋದೇನು ದೊಡ್ಮಾತ್ರಲ್ಲ (ಎನ್ನುತ್ತ ತನ್ನ ಮೊದಲಿನ ಜಾಗೆಗೆ ನಡೆದು ಬಂದು ಕುರ್ಚಿಯಲ್ಲಿ ಕುಳಿತುಕೊಳ್ಳುತ್ತ) 'ಒಬ್ಬ ಮನುಷ್ಯಗ ಒಂದು ವಾರಕ್ಕ ಒಂದೇ ಸೇರು ಅಕ್ಕಿ ಸಾಕು' ಅಂತ ನಿಮ್ಮ ಲೆಕ್ಕ ನೋಡಿದೆ, ಅದರಂತೆ ತಿಂದೂ ನೋಡಿದೆ. ಆದ್ರೆ ನಿಂ ಲೆಕ್ಕದ ಪ್ರಕಾರ ತಿಂದು ನಡೀಬೇಕಾದ್ರ, ಒಬ್ಬ ಮನುಷ್ಯಗ ಒಂದೇ ವ್ಯಾಳ್ಯಾಕ್ಕ ನಾಲ್ಕು ಕಾಲ್ಗಳು ಬೇಕು ಅಂತ ಉತ್ತರ ಹೊರಟಿತು; ಎರಡು ಕಾಲ್ಗಳ ಶಕ್ತಿ ಸಾಲೋದಿಲ್ಲ ಅಂತ. ಅದ್ಕ—

**ಬ್ರಹ್ಮಯ್ಯ :**— (ಒಮ್ಮೆಲೆ ಕೈಯೊಳಗಿನ ಒಂದು ಕಾಗದವನ್ನು ಪೇಚಿಗಪ್ಪಳಿಸಿ) ಆ ಖಲಾಸ್ದಾರ್ನ ಕರೀ ಇಲ್ಲಿ! ಯಾರಿದ್ದೀರಿ ಅಲ್ಲಿ—(ಎಂದು ಮೇಲಿ ನೋಡುವಷ್ಟರಲ್ಲಿ 'ಕರೀತೀನ್ರಿ ನಾನೇ, ಸಾಹೇಬ್ರ' ಎನ್ನುತ್ತ ವಿಷ್ಣುಪಂತನು ಜಾರುವನು. ಮತ್ತೆ ಕಾಗದವನ್ನು ನೋಡುತ್ತ ಸಿಟ್ಟಿನಿಂದ) ಅವ್ಯವಸ್ಥಾ! ಅಂದಾ-ದುಂದಿ! (ಬಾತ್ಮೀದಾರರನ್ನು ನೋಡಿ) ನೋಡಿದಿರಾ— ? ಇಂಥಾ ಕಾರಕೂನರು! ಮತ್ತೆ ಮುಂದಿಗೆ ಸಾಲೋದಿಲ್ಲ ಅಂತ ನಿಮ್ಮ ವರ್ತಮಾನ ಪತ್ರದವರು ನನ್ನ ಮ್ಯಾಲೇ ತೇಗೋದು! ಇಲ್ಲಿ ಒಂದು ಮನೆ ಇದೆ. ಮುಂಚೆನಿಂದ ನಾಲ್ಕು ಜನ ಅಲ್ಲಿ. ಈಗ ಒಮ್ಮೆಲೆ ಎಂಟು ಜನ ಅಂತ ಲೆಕ್ಕ ಹಾಕಿ (ಎಂದು ಕಾಗದವನ್ನು ತಿರಸ್ಕಾರದಿಂದ ಬಿಸುಟಿ, ಎದ್ದು ಮೇಜಿನ ಎಡಬದಿಗೆ ಬರುವಷ್ಟರಲ್ಲಿ, ರುದ್ರಪ್ಪ ಖಲಾಸ್ದಾರನು ಬಂದುದನ್ನು ಎದುರಿನಿಂದ ನೋಡಿ, ಅಧಿಕಾರದಿಂದ) ರುದ್ರಪ್ಪಾ ಖಲಾಸ್ದಾರ್, ಈ ಕಾಗದದ ಅರ್ಥ ಏನು? (ಅದನ್ನು ಎತ್ತಿ ಅವನ ಕೈಯಲ್ಲಿ ಕೊಡುವನು. ಅವನು ನೋಡಿ, ಯಾವ ಮಾತೆಂದು ತಿಳಿಯದೆ ಪೆಚ್ಚನಂತ ತನ್ನನ್ನೇ ನೋಡಲು, ಸಿಟ್ಟಿನಿಂದ) ಕಾಗದ ನೋಡೋದ್ನ ಬಿಟ್ಟು ನನ್ಮುಖಾ ಏನು ನೋಡ್ತೀ? ಕಾಗದ ಸಿಗೋದಿಲ್ಲ.ಅಂತ ನಾನು ಮುಖದ ಮ್ಯಾಲೆ ಏನಾದ್ರೂ ಬರೆದುಕೋತೀನಿ ಅಂತ ತಿಳಿದಿಯೋ ಏನು?........ಒಂದು ಮನೆಗೆ ಸೀದಾ ಕೊಡ್ಬೇಕಾದ್ರ ರೂಲ್ಸ್ ಏನಿವೆ ಗೊತ್ತಿದೆ ಏನು ನಿನ್ಗೆ?

**ಖಲಾಸ್ದಾರ :**— (ಆಶ್ಚರ್ಯದಿಂದ) ಆ ಮನಿಯೊಳ್ಗ ಜನ ಎಷ್ಟು ಅಂತ—

**ಬ್ರಹ್ಮಯ್ಯ:**— ಬರೇ 'ಜನಾ ಎಷ್ಟು' ಅಂತಲೊ, ಏನು 'ತಿನ್ನೋ ಯೋಗ್ತಾ ಇದ್ದ ಜನಾ ಎಷ್ಟು' ಅಂತಲೊ? ಒಂದ್ಮನಿಯೊಳ್ಗ ನಾಲ್ಕು ಜನಾ ಐದು ಹೆಣಾ ಇದ್ರೆ, ಒಂಬತ್ಮಂದಿ ಅಂತ ಲೆಕ್ಕಾ ಹಾಕೋವ ಎನ್ನೀನು?

**ಖಲಾಸ್ದಾರ :—** ಹಾಂಗಲ್ಲ—

**ಬ್ರಹ್ಮಯ್ಯ :—** (ನಡುಗಿದೆಯು) 'ಅಲ್ಲ' ಅಂತ ನನ್ಗ ಹೇಳ್ಬೇಡ ಬಾಯಿಯಿಂದ! ಆ ಕಾಗದ ಮ್ಯಾಲೆ ನಿನ್ನ ಕೈಯಿಂದ ಏನ್ಬರೆದಿರುವಿ ನೋಡು! ನಿನ್ಬುದ್ಧಿ ಹೀಂಗ ಅಂತ ಗೊತ್ತಾದ್ರ, (ಬಾತ್ಮೀದಾರನನ್ನು ತೋರಿಸುತ್ತ) ಅವರು ಬರೆದುಹಾಕಿ ಬಿಡ್ತಾರ ಅಂದೆ....ತುಂಡಖಂಡದ—

**ನಿರಾಧಾರಜಿ :—** (ತಟ್ಟನೆ) ಖಂಡತುಂಡದ ಬಾತ್ಮೀದಾರ.... (ನಗೆಯಿಂದ ರುದ್ರಪ್ಪನಿಗೆ) ನಾನೇ—ಈಗ ಅಂದ್ರ, ಹೀಗ ಪ್ರಶ್ನೆ ಬಂದದ್ದು— (ಕಾಗದದಲ್ಲಿ ತೋರಿಸುತ್ತ) ಈ ಮನೀಯೊಳ್ಗ ಮುಂಚಿನಿಂದ ನಾಲ್ಕು ಜನ ಇದ್ದು, ಒಮ್ಮೆಲೆ ಎಂಟು ಹ್ಯಾಂಗ ಆಯ್ತು ಅಂತ—

**ಖಲಾಸ್ದಾರ :—** (ಅವನಿಗೆ ತುಸು ಧೈರ್ಯದಿಂದ) ಅಂದ್ರ — ಮುದುಕ್ರು, ಹುಡುಗ್ರು, ರೋಗಪೀಡಿತರು ಇವರಿಗಷ್ಟೆ ಸೀದಾ ಕೊಡ್ಬೇಕು ಅಂತ ನಮ್ಮ ರೂಲ್ಸು—

**ಬ್ರಹ್ಮಯ್ಯ :** (ತಿರಸ್ಕಾರದಿಂದ) ಅದೇನ್ಗೊತ್ತಿಲ್ಲೇನವರ್ಗೆ? ಅವರ್‍ಯಾರು,ಅಂತ—

**ನಿರಾಧಾರಜಿ :—** ಖಂಡತುಂಡದ—

**ಬ್ರಹ್ಮಯ್ಯ :—** ದಾತ್ಮೀಖಾರು—ದಾತ್ಮೀಬಾರು ಅವರೂ ಅಂದೆ!

**ಖಲಾಸ್ದಾರ :—** ಅಲ್ಲ ಅಂದ್ರೆ–ಅವರಿಗ್ಹೇಳ್ತಿದ್ದೆ— ಮುಂಚೆ ಈ ಮನಿಯೊಳ್ಗ ಅಂಥವ್ರು ನಾಕೇ ಜನ ಇದ್ರು, ಆದ್ರ ಹೋದ ವಾರದಿಂದ ಉಳಿದ ನಾಲ್ಕು ಜನಕ್ಕೂ ರೋಗ ಬಂದಿತು—ಅದಕ್ಕ ಎಂಟು ಜನಾ ಅಂತ ಬರೀಬೇಕಾಯ್ತು—ಅಂತ

**ನಿರಾಧಾರಜಿ :** (ನೋಟಬುಕ್ಕನ್ನು ಹಿಡಿದು) ಏನು? ರೋಗ? ಯಾವ ರೋಗ?

**ಬ್ರಹ್ಮಯ್ಯ :—** (ತಿರಸ್ಕಾರದಿಂದ) ಯಾವ್ದೂ ಇಲ್ಲ....ಠಕ್ಕರು!.... ಗಟ್ಮುಟ್ಟ ಇದ್ರ ಸೀದಾ ಸಿಗೋದಿಲ್ಲ ಅನ್ನೋ ರೂಲ್ಸು ಗೊತ್ತಾದ ಕೂಡ್ಲೆ, ರೋಗ್ಬಂತೂ ಅಂತ ಹಾಸಿಗೆ ಹಿಡೀತಾರ....ಠಕ್ಕರು! ಮೈಯೊಳಗ ಶಕ್ತಿ ಇದ್ದವ್ರು ಇನರ್ ಕಂಟ್ರೋಲ್ ಮಾಡ್ಲಿಕ್ಕೇಬೇಕು....ತಿಳೀತೇನು, ಖಲಾಸ್ದಾರ್?....ಊರೊಳ್ಗಿನ ಡಾಕ್ಟರ ಜನಕ್ಕ ಒಂದು ಪ್ರಕಟನಾ ಕಳಿಸ್ರಿ ನಂ ಆಫೀಸ್ನಿಂದ....'ಇವತ್ತಿನಿಂದ ಹಸಿವೆಗೆ ರೋಗ ಅಂತ ತಿಳೀ-ತಕ್ಕದ್ದಲ್ಲ' ಅಂತ....ಮೈಗಳ್ಳರು! ಠಕ್ಕರು!

**ಖಲಾಸ್ದಾರ:** (ಅಧೈರ್ಯದಿಂದ) ಆ ಇವ್ರು ಬಂದಾರ, ತಂ ಕಡೆ ಕೆಲಸ ಅಂತ—

ಬ್ರಹ್ಮಯ್ಯ :— ಯಾರು ?
ಖಲಾಸ್ದಾರ :— ನಾ ಹೇಳ್ದೆ : ನ್ಯಾಲಿಂದ ನ್ಯಾಲಿ ತ್ರಾಸ ಕೊಡಬ್ಯಾಡ, ಸಾಹೇಬ್ರಿಗೆ ಕೆಲ್ಸ ಭಾಳ....ಅಂತ—
ಬ್ರಹ್ಮಯ್ಯ :— (ಹಟದಿಂದ) ಯಾರವ ? ಯಾರ್ನಡೆ ಬಂದಾನ ?
ಖಲಾಸ್ದಾರ : — ನಂ ಸ್ಟಾಕಿಲ್ದಾರ ಆನರ್ೋಗ ಸೆಟ್ಟ—ತಂ ಕಡೆ—
ಬ್ರಹ್ಮಯ್ಯ :— ನನ್ನಡೆ ಬಂದಿದ್ರ ನೀ ಯಾಕ ನಡುವೆ ಹೇಳ್ತೀ ? ಕಳಿಸ್ಕೊಡು ಇಲ್ಲಿ ! (ಖಲಾಸ್ದಾರನು ಹೋಗಲು ತನ್ನ ಕುರ್ಚಿಯಲ್ಲಿ ಕುಳಿತುಕೊಂಡು) ತಂ ಬುದ್ಧೀ ನ್ಯಾಲೆ ತಂ ಕಂಟ್ರೋಲಿಲ್ಲ, ಇಂಥಾ ಕಾರಕೂನರಿವ್ರು ! (ಬಲಗಡೆ ನೋಡಿ) ಬರ್ರಿ; ಬರ್ರಿ ಸ್ಟಾಕಿಲ್ದಾರ ಸೆಟ್ರ....ಏ—ಯಾರಿದ್ದೀರಿ? ಇನ್ನೊಂದು ಕುರ್ಚಿ ತಕ್ಕೊಂಡು ಬರ್ರಿ....
ಸ್ಟಾಕಿಲ್ದಾರ :— ಶರಣ್ರಿ....ಇರ್ಲಿ ಬಿಡ್ರಿ, ಕಂಟ್ರೋಲ್ದಾರ ಸಾಹೇಬ್ರ........ ಒಂದ್ಮಾತು ಕೇಳೋದೈತಿ.... (ಖಲಾಸ್ದಾರನು ಕುರ್ಚಿಯನ್ನು ತರುವಾಗ) ಎಲಾ ನಿನು ! ಇರ್ಲಿ ಬಿಡ್ರಿ.... ಕುರ್ಚಿ ನ್ಯಾಗ ಕುಂತರ ಲೆಕ್ಕಾನೇ ತಪ್ಪಿಧಾಂಗ ಆಗ್ತೇತಿ ನಮ್ಗ (ಎಂದು ಬಾತ್ಮೀದಾರನನ್ನು ನೋಡಿ ಹಲ್ಲು ಕಿರಿಯುವನು. ಖಲಾಸ್ದಾರನು ಬ್ರಹ್ಮಯ್ಯನ ಎಡಬದಿಗೆ ಮೇಜಿನ ಮುಂತುದಿಗೆ ಕುರ್ಚಿಯನ್ನಿಟ್ಟು ಹೋದ ಮೇಲೆ) ಮೊಣಕಾಲ್ಮಡಿಚಿ ಅದರ ನ್ಯಾಗ ಲೆಕ್ಕಾ ಬರಿಯೋ ಜನಾ ನಾವು—(ಎನ್ನುತ್ತ ಕುರ್ಚಿಯಲ್ಲಿ ಕೂಡ್ರುವನು).
ನಿರಾಧಾರಜಿ : — ಅದ್ಕೇ ಹೇಳೋದಲ್ಲೇನು ಗಾದೆಯ ಮಾತು : ಗಂಡ್ಸರ ಬುದ್ಧಿ ಮೊಳಕಾಲ ನ್ಯಾಲೆ ಅಂತ.
ಬ್ರಹ್ಮಯ್ಯ:(ನಕ್ಕು)ಅವರ್ಮುಂದ ಏನಾದ್ರೂ ಅನಬ್ಯಾಡ್ರಿ,,ಸ್ಟಾಕಿಲ್ದಾರ್ರೆ..ಅವರು,
ನಿರಾಧಾರಜಿ :— (ನಡುವೆಯೆ, ಥಟ್ಟನೆ) ಬಾತ್ಮೀದಾರ ನಾ—
ಬ್ರಹ್ಮಯ್ಯ :— ಹಂ.... ತುಂಡ್ಬಂಡದ ಖಾತೇದಾರ್ರವ್ರು— (ಒನ್ಮೈಲೆ, ಸ್ಟಾಕಿಲ್ದಾರನಿಗೆ) ಹಂ.... ಮತ್ತೇನು, ಆನರ್ೋಗ ಸೆಟ್ರಿ ? ವ್ಯಾಪಾರದ ಏರಿಕೆ ನಡೆದಿದೆ ಇಲ್ಲೊ ? ಅಂ ?.... ಹಹ !
ಸ್ಟಾಕಿಲ್ದಾರ :— ಏರಿಕೆ ?....ಅನ್ರಿ, ಬೇಕಾರ ಹಾಂಗೂ ಅನ್ರಿ....ಯಾಪಾರ ಯಾಕ - ಅಂಗ್ಡಿನೇ ಏರಾಕ ಹತ್ತೇದ ಅನ್ರಿ....ಒಳ್ಗ ಸಾಮಾನೇ ಇಲ್ಲ—ಹಗುರಾದ ನ್ಯಾಗ ಗಾಳಿಗುಂಟ ಏರಾಕs ಬೇಕಲ್ಲ ?
ಬ್ರಹ್ಮಯ್ಯ :— (ಆಶ್ಚರ್ಯದಿಂದ) ಸಾಮಾನಿಲ್ಲ ?

**ಸ್ಟಾಕಿಲ್ದಾರ** :— (ಪರಾತಿಯ ದನಿಯಿಂದ) ಇಲ್ಲ **ಕಂಟ್ರೋಲ್**ದಾರ್ರೀ, ಸ್ಟಾಕೇ ಇಲ್ಲಾ ಅಂದೆ.... (ಬ್ರಹ್ಮಯ್ಯನು ದಿಟ್ಟಿಸಲು) ನನಗ್ಗೊತ್ತೈತಿ, ಕಂಟ್ರೋ-ಲ್‌ಸಾಬರು ಈ ಮಾತಿಗೆ ಸಿಟ್ಟಾಗ್ತಾರ ಅಂತ.... (ಬಾತ್ಮೀದಾರನಿಗೆ) ಆದ್ರ ಇದ್ಮಾತು ಹೇಳಾಕೇ ಬೇಕು, ಯಾಕ್ರೀ? ನಂ ಕಂಟ್ರೋಲ್ ಸಾಹೇಬ್ರು ಕರುಳಿನ ಜನಾ....ನನ್ನಂಥಾವ ಹೇಳಿದ್ರ ' ಹೋಗೊ ಸೆಟ್ಟಿ! ದಯಾ-ಮಾಯಾ ಬಿಟ್ಟಿ! ' ಅಂತ ಬೆಯ್ತಾರು....ಆದ್ರ ನೋಡ್ರಿ— ಒಂದೊಂದಾಳಿಗೆ ವಾರಕ್ಕ ಒಂದೊಂದು ಸೇರು ಅಕ್ಕಿ ಕೊಡ್ತಾ ಹೋದ್ರ, ಸ್ಟಾಕು ಹ್ಯಾಂಗ ಉಳೀಬೇಕು ಹೇಳ್ರಿ?

**ನಿರಾಧಾರಜಿ** :— (ಬೆಪ್ಪಾಗಿ) ಒಂದು ಸೇರು ಅಂದ್ರ ಕಡಿಮೆ ಆಗಲಿಲ್ಲೇನ್ರಿ?

**ಸ್ಟಾಕಿಲ್ದಾರ** :— (ಗಟ್ಟಿಯಾಗಿ ನಕ್ಕು) ಕಡಿಮೆ! ಹಹ! ಮತ್ತ ಸೆಟ್ಟಿ ಲೆಕ್ಕಾನೇ ಹೇಳ್ತಾನ ಅಂದೀರಿ— ಆದ್ರೂ ಇದ್ಮಾತು ಹೇಳಾಕs ಬೇಕಲ್ರಿ?—ತಿನ್ನೋ ಲೆಕ್ಕಾನೇ ಗೊತ್ತಿಲ್ಲ ನಂ ಜನಕ್ಕ... ತಿಂದs-ಟೆಲ್ಲಾ ರಗತ ಆಗತೈತಿರಾ? ಅಂದ್ಮ್ಯಾಕ ತಿನ್ನೋಅಟು ಕೊಡ್ಬೇಕು ಹೇಳ್ರಿ? ಯಾವ್ದು ಏಟಂತೆ (=ಎಷ್ಟಂತ) ರಗತ ಆಗತೈತಿ, ಫಗತ (=ಫಕ್ತ) ಅಟೊಂದು ಕೊಡೋದು-ಅದು ಲೆಕ್ಕ....ಅದನ್ಬಿಟ್ಟು ಹೊಟ್ಟೀ ವಳ್ಗಿನ ಲಬ್ಬರ ಚೀಲಾ ತುಂಬೋದ್ನು ತಿಂಬೋದು ಅಂದ್ರ ಯಾವ ಲೆಕ್ರಿ? ಆದ್ರ ಹೇಳಿದ್ನೆಲ್ಲ—ಕಂಟ್ರೋಲ್‌ಸಾಯೇಬ್ರು ಕರುಳಿನ ಸಾಯೇಬ್ರು ಅಂತ....ಅವರ್ಹೇಳಿದಾಂಗ ಕೊಟ್ನೆ—ಈಗ ಸ್ಟಾಕೇ ಇಲ್ಲ!

**ಬ್ರಹ್ಮಯ್ಯ** :— (ಬಲಬದಿಗೆ ಮುಖ ಹೊರಳಿಸಿ) ಸಮಾಲ್ದಾರ್! ಏ–ಯಾರಿ-ದ್ದೀರಿ ಅಲ್ಲಿ? ಆ ವಿಷ್ಣುಪಂತ ಸಮಾಲ್ದಾರ್ನ ಕಳಿಸೊ....ಹಂ....ಮತ್ತ ಹಾಗೇ ರುದ್ರಪ್ಪಾ ಖಲಾಸ್ದಾರಗೂ ಬಾ ಅಂತ ಹೇಳು .. (ಸ್ಟಾಕಿಲ್ದಾರ-ನಿಗೆ) ಕೂಡ್ರಿ ಒಂದ್ನಿಮಿಷ....(ಇಬ್ಬರೂ ಕೈಯೊಳಗೆ **ಕೆಲಸದ** ಫೈಲುಗಳನ್ನು ಹಿಡಿದುಕೊಂಡು ಬರುವರು. ವಿ. ನು ಮೇಜಿನ ಎದುರು **ಸ್ಟಾಕಿಲ್ದಾ**ರನ ಬದಿಗೆ, ಖಲಾಸ್ದಾರನು ಬ್ರಹ್ಮಯ್ಯ—ಬಾತ್ಮೀದಾರರ ನಡುವೆ ನಿಲ್ಲುವರು.) (ವಿ. ಗೆ) ಎಲ್ಲಾ ಕಡಿಂದ ಎಷ್ಟು ಕೂಡ್ಸೇದ ಅಂದಿ ನೀನು, ಸಮಾಲ್ದಾರ್?

**ವಿಷ್ಣುಪಂತ** :— ೨೦,೦೦೦ ಚೀಲ.

**ಬ್ರಹ್ಮಯ್ಯ** :— ಏನು?

**ವಿಷ್ಣುಪಂತ** :—ಇಪ್ಪತ್‌ಸಾ—

**ಬ್ರಹ್ಮಯ್ಯ** :— (ನಡುವೆಯೆ) ಇಪ್ಪತ್ ಸಾವಿರ ಏನು - ಅಂದೆ!

**ವಿಷ್ಣುಪಂತ** :— (ಹೆದರಿ) ಇಪ್ಪತ್‌ಸಾವಿರ ಚೀಲ.

**ಬ್ರಹ್ಮಯ್ಯ** :— (ಗದ್ದರಿಸಿ) ಅಹುದೋ! ಆದ್ರೆ ಇಪ್ಪತ್ ಸಾವಿರ ಚೀಲ— ಏನು ಅಂದೆ! ಬರಿಯ ಚೀಲ ಅವೆ ಏನು?

**ವಿಷ್ಣುಪಂತ** :— (ಹೆದರಿ) ಅಹುದು— ಬರಿಯು—

**ಬ್ರಹ್ಮಯ್ಯ** :— ಏನಂದಿ? ಬರಿಯು ಚೀಲ! ಒಳಗ ಏನೂ ಇಲ್ಲ?

**ವಿಷ್ಣುಪಂತ** :— (ನೋಲಿಸಂತೆ) ಏನಿಲ್ಲಾ ಅಂತಲ್ಲ....ಎಷ್ಟೋ ಇಲಿಗಳ್ನ ಹೊಡೆದು ಹಾಕ್ಯಾರ—ಆದ್ರೂ—

**ನಿರಾಧಾರಜಿ** (ಒಮ್ಮೆಲೆ ಎಚ್ಚತ್ತವನಂತೆ) ಏನಂತೀರಿ? ಸಮೂಲಾದ್ದರ್ರೆ? ನೀವು ಕೂಡಿಸಿಟ್ಟ ಧಾನ್ಯ ಎಲ್ಲಾ ಇಲಿ ತಿಂದಿವೆ? ಏನು? ಏನಿದು ಅನರ್ಥ, ಸಮೂಲಾದ್ದರ್ರೆ?

**ಸ್ಟಾಕಿಲ್ದಾರ** :— ಅಧರಾಗೇನೈತಿ ಬಿಡ್ರಿ! ಊರಾಗಿಟ್ಟ ಕಾಳು-ಕಡಿ, ಇಲಿ ತಿನ್ನದೇ ಹುಲಿ ತಿನ್ಬೇಕಂತೀರೇನು?

**ನಿರಾಧಾರಜಿ** :— ಅಲ್ಲ—ಹೀಂಗಾದ್ರ ಮುಂದಿಯ ಗತಿ ಏನು ಅಂತೀನಿ!

**ಬ್ರಹ್ಮಯ್ಯ** :— ಹೆದರಬ್ಯಾಡ್ರಿ—

**ನಿರಾಧಾರಜಿ** :—(ಒಂದೊಂದು ಶಬ್ದವನ್ನು ಬಿಡಿಸಿ ಹೇಳುತ್ತ) ಖ-ಂ-ಡ-ತು-ಂ-ಡ-ದ ಬಾ-ತ್ಮಿ-ೕ-ದಾ-ರ ನಾನು.

**ಬ್ರಹ್ಮಯ್ಯ** : – ಅದ್ಕೇ ಹೆದರಬ್ಯಾಡಿರಿ ಅಂದೆ....ಹದರಿ ಏನಾದ್ರೂ ಹುಚ್ಚುಚ್ಚ ಬರೀನೂ ಬ್ಯಾಡ್ರಿ....ಮುಂದಿಯ ಗತಿ ಏನು ಅಂತ ಚಿಂತೆ ಮಾಡುವುದು ಯಾಕೆ? ಅದ್ನೂ ಇಲ್ಲೇ ತಿಳಿದ್ಕೊಂಡು ಬಿಡೋಣ. (ಬದಿಯಲ್ಲಿ ನಿಂತ ಖಲಾಸ್ದಾರನಿಗೆ, ಮೇಲೆ ಮುಖ ಮಾಡಿ) ಏ, ಖಲಾಸ್ದಾರ್, ಊರೊಳಗ ಮಂದಿ ಎಷ್ಟು ಇದೆ, ಲೆಖ್ಖ ಇದೆ ಏನು ನಿನ್ನಡೆ?

**ಖಲಾಸ್ದಾರ** :— (ಕೈಯೊಳಗಿನ ಫೈಲಿನಲ್ಲಿ ಕಾಗದವನ್ನು ನೋಡುತ್ತ) ೨೮,೦೦೦.

**ಬ್ರಹ್ಮಯ್ಯ** :— Census (ಖಾನೇಸುಮಾರಿ) ದೊಳ್ಗಿನ ಅಂಕಿ ಬ್ಯಾಡೊ ನನ್ಗ! ಈ ಕ್ಷಣಕ್ಕ ಜೀವಂತ ಇದ್ದ ಜನ ಎಷ್ಟು ಅಂತೀನಿ.

**ಖಲಾಸ್ದಾರ** :— (ಮತ್ತೊಂದು ಕಾಗದವನ್ನು ನೋಡುತ್ತ) ೯೦೦೦.

**ಬ್ರಹ್ಮಯ್ಯ** :— ನಿನ್ನೆ ಸಂಜೆಯ ವರೆಗಿನ ಅಂಕಿ ಏನಿದು?

**ಖಲಾಸ್ದಾರ** :— ಹೋದ ವಾರದ್ದು!

**ಬ್ರಹ್ಮಯ್ಯ** (ಸಿಟ್ಟಿನಿಂದ ಮೇಜನ್ನು ಬಡಿದು) ಹಾಳಾಯ್ತು ನಿನ್ನ ಬುದ್ಧಿ! 'ಈ ಕ್ಷಣಕ್ಕ ಜೀವಂತ ಇದ್ದ ಜನ' ಅಂತ ನಾ ಕೇಳ್ತೇನಿ, 'ಹೋದ ವಾರದ್ದು ಅಂತ! ಈ ಎಂಟು ದಿವಸ ಏನ್ಮಾಡ್ತಿದ್ರು ಜನ? ಯಾರೂ ಸಾಯಲಿಲ್ಲ?

**ವಿಷ್ಣುಪಂತ**:— (ಗೆಳೆಯನ ಸಹಾಯಕ್ಕೆ ಬಂದು) ಆ ಲೆಕ್ಕದ ಖಾತೆ **ಹೆಗಲ್ದಾರನ** ಕಡೆ ಅದೆ—

**ಬ್ರಹ್ಮಯ್ಯ**: ಅವನ್ನ ಕಳುಹಿಸಿ ಕೊಡ್ರಿ ಹಾಗಾದ್ರೆ....ಇಲ್ಲಿ ಯಾಕೆ ನಿಂತೀರಿ— ಗೊತ್ತಿಲ್ದನ್ನ ಹೇಳ್ಲಿಕ್ಕೆ? (ಇಬ್ಬರೂ ಅಂತರ್ಧಾನವನ್ನು ಹೊಂದುವವರ ವೇಗದಿಂದ ಹೋಗುವರು) ದಿನಕ್ಕ ದಿನ ಲೆಕ್ಕಾ ಇಡೋದ್ಕೂ ಗತಿ ಇಲ್ಲ!

**ಸಾಕಿಲ್ದಾರ**:— ಕಚೇರಿ ಕೆಲ್ಸಾನೂ ಬೆಳೆದೇತಿ, ಅದೇನ್ ಸುಳ್ಳಲ್ಲ—

**ಬ್ರಹ್ಮಯ್ಯ**:— ಅಂದ್ರೆ? ನನ್ನೆಲ್ಸ ಬೆಳೆದೇ ಇಲ್ಲೇನು? ನನಗ ಮಾಡೋದಾಗ್ತಿದೆ, ಇವರಿಗೆ—

**ಸ್ಟಾಕಿಲ್ದಾರ**:—(ಹುಚ್ಚು ನಗೆಯಿಂದ) ಕಂಟ್ರೋಲ್‌ದಾರರ ತಾಕತ್ತು ಮಿಕ್ಕ ಜನಕ್ಕ ಹ್ಯಾಂಗ ಬಂದೀತ್ರಿ? (ನಿರಾಧಾರಜಿಗೆ) ಯಾಕರೀ, ಖಾತೇದಾರ್ರೆ?

**ನಿರಾಧಾರಜಿ**:— (ತನ್ನಷ್ಟಕ್ಕೆ ಎನ್ನುವಂತೆ) ೨೪೦೦೦... ೯೦೦೦ .... ಅಂದ್ರೆ ೧೯೦೦೦ ಸಾವಿರ ಜನ ಸತ್ತರೆ?

**ಬ್ರಹ್ಮಯ್ಯ**: ಹಾಂ—ತಡೀರಿ—ಇನ್ನೂ ಬರೆದುಕೋಬ್ಯಾಡಿರಿ—ಕಳೆದ ೮ ದಿವ್ಸ— ಇಂದಿನ ಮಿತಿಗೆ ಎಷ್ಟು ಜನ ಸತ್ತಿತ್ತು ಅನ್ನೋದು....(ಬಲಬದಿಗೆ ಕೆಮ್ಮಿದ ದನಿಯನ್ನು ಕೇಳಿ ತಡೆಯುವನು. ಸಿಟ್ಟಿನಿಂದ) ಯಾರು?

**ಯಮಪ್ಪಣ್ಣ**: (ಮುಂದೆ ಬಂದು) ನಾ—ಹೆಗಲ್ದಾರ....ನನ್ನ ಕರೆದ್ರು ಅಂತ—

**ಬ್ರಹ್ಮಯ್ಯ**:— ಏನ್ಮಾಡ್ತಿದ್ದಿ ನೀನು?

**ಹೆಗಲ್ದಾರ**:— ಸ್ಟಾಕಿಲ್ದಾರ ಮನೀಕಡೆ ಹೊರಟಿದ್ದೆ—

**ಸ್ಟಾಕಿಲ್ದಾರ**:— (ಹೆದರಿಕೆಯಿಂದ ಪುಟದೆದ್ದು) ನಂ ಮನೀ ಕಡೆ! (ಒಮ್ಮೆಲೆ ದನಿ ಇಳಿದು) ಎಲಾ ಶಿವನ! ಯಾರಿಗೂ ಬ್ಯಾನಿ—ಬ್ಯಾಸರಕಿ—ಇದ್ದಿಲ್ಲ ....ಹೀಂಗ ಹ್ಯಾಂಗ —

**ಹೆಗಲ್ದಾರ**:— (ಅವಸರದಿಂದ) ಛೆಛೆ! ಸ್ಟಾಕಿಲ್ದಾರ್ರೆ, ಹಾಂಗೇನೂ ತಿಳೀಬ್ಯಾಡ್ರಿ. ಡೂಟಿ (duty) ಮ್ಯಾಲೆ ಅಲ್ಲ, ಖಾಸಗೀ ಕೆಲಸಕ್ಕೆ ಹೊರಟಿದ್ದೆ (ಬ್ರಹ್ಮಯ್ಯನು ಸಿಟ್ಟಿನಿಂದ ನೋಡಲು) ಮುಂದಿನ ವಾರ ಹಬ್ಬ, ಅಂಗ್ಡಿಯೊಳಗ ಸ್ಟಾಕ್ ಇಲ್ಲ, ಅದ್ಕ ಮನೀಗ್ಹೋಗೋಣ ಅಂತ—

**ಸ್ಟ್ಯಾಕಿಲ್ದಾರ :—** (ಒಸ್ಮೆಲೆ ಉಸಿರ್ಗರೆದು) ಬಾರೋ ಮಾರಾಯಾ! ನಿನ್ನ ಮನೀತನಕ ನಡದು ಬಂದು ಕೊಡ್ತೀನಿ—ಆಯ್ತಿಲ್ಲೊ—ಪಟ್ಟಿ ಮಾಡಿ ಕಳಿಸು ಸಾಮಾನಿಂದು! ಶಿವಶಿವಾ! (**ಗಾಳಿ ಹಾಕಿಕೊಳ್ಳುವನು**)

**ಬ್ರಹ್ಮಯ್ಯ :—** ಹಂ—ಮೊದ್ಲು ಆಫೀಸಿನ ಕೆಲ್ಸ ನೋಡಿಕೊ—

**ನಿರಾಧಾರಜಿ :—** (ನೋಟಬುಕ್ಕನ್ನು ಹಿಡಿದು)ಹೆಗಲ್ದಾರ್ರೆ, ಈ ಕಳೆದ ಎಂಟು ದಿವಸ್ದೊಳಗೆ ಎಷ್ಟು ಜನ ಸತ್ತಾರೆ?

**ಹೆಗಲ್ದಾರ :—** ಇನ್ನೂ ಪೂರಾ ಲೆಕ್ಕ ಆಗಿಲ್ಲ.

**ಬ್ರಹ್ಮಯ್ಯ :—** (ಅಧಿಕಾರದಿಂದ) ಏನಂದಿ? ಅದು ಯಾಕ ಉಳೀತು? ದಿನಕ್ಕ ದಿನಾ ಆ ಲೆಕ್ಕ ತರೋದು ಯಾರ್ಕೆಲ್ಸ?

**ಹೆಗಲ್ದಾರ :—** ನನ್ನದೇರಿ ಆ ಕೆಲ್ಸ....ಅದ್ಕೇ ದಿನಾ ಮೋಟಾರ್ದೊಳಗ ಹೋಗ್ಬರ್ತಿದ್ದೆ....ಪೆಟ್ರೋಲ್ ಇಲ್ಧಾಂಗಾಯ್ತು .... ಕುದರೀ ಹತ್ತಿ-ಕೊಂಡು ಹೋಗಿಬರ್ತಿದ್ದೆ....ಮುಂದೆ ಕುದುರೆಗೆ ಕಡ್ಲಿ ಇಲ್ಧಾಂಗ ಆಯ್ತು, ಕೋಣನ ಮ್ಯಾಲೆ ಸವಾರಿ ಮಾಡಿದೆ ಇತ್ತಿತ್ತಲಾಗಿ.... ಆದರೆ ಹೋದ ವಾರ ಮೇವು ಇಲ್ಲದ್ದಕ್ಕ ಆ ಕೋಣನೂ ಸತ್ತು ಹೋಯಿತು....ಮೂರು ನಾಲ್ಕು ದಿವಸ ನಡೆದ್ಕೊಂಡೇ ಹೊಗ್ತೀನಿ.... ಅಂದ್ರ—ಅಂ—ಮಧ್ಯಾಹ್ನದ ಊಟಾದ ಮ್ಯಾಲೆ ಒಂದಿಷ್ಟು—ವಿಶ್ರಾಂತಿ—ಅಲ್ಲ—ಅಂದ್ರ—ಸಾವ್ಕಾಶ ಆಗ್ತದ—

**ಬ್ರಹ್ಮಯ್ಯ :—** ಎಷ್ಟು ದಿವಸ ನಡೆದುಕೊಂಡು ಹೋದಿ?

**ಹೆಗಲ್ದಾರ :—** ಮೂರು—ನಾಲ್ಕು ದಿವಸ.

**ನಿರಾಧಾರಜಿ :—** ಆ ೩—೪ ದಿವಸ್ದೊಳಗೆ ಸತ್ತ ಜನ ಎಷ್ಟು?

**ಹೆಗಲ್ದಾರ :—** (ಕಿಸೆಯೊಳಗಿನ ಕಾಗದವನ್ನು ತೆಗೆದು) ಏಳು—ಸಾವಿರದಾ-ಎಂಟು ನೂರಾ—ಹನ್ನೊಂದುವರೆ (೭,೮೧೧).

**ಬ್ರಹ್ಮಯ್ಯ :—** ಏನಂದಿ?

**ಹೆಗಲ್ದಾರ :—** ಅಂದ್ರೆ ೭,೮೧೧ ಜನ ಆಗಿತ್ತು. ಒಂದೇ ಕೇಸು ಉಳಿದಿತ್ತು ....ಮರುದಿವಸ ಮುಂಜಾನೆ ಆತ ಸಾಯೋದು ಗಟ್ಟಿ ಅಂತ ಡಾಕ್ಟರ್ರು ಹೇಳಿದ್ರು—ಅದ್ಕ ಆ ದಿನದ ಮಟ್ಟಿಗೆ ಅರ್ಧಾನೇ ಲೆಕ್ಕಕ್ಕ ಹಿಡಿದೆ.

**ಸ್ಟಾಕಿಲ್ದಾರ:** (ಬಾತ್ಮಿದಾರನಿಗೆ) ಭಲೆ! ನೋಡಿದ್ರಿಲ್ಲೊ ನಂ ಕಂಟ್ರೋಲ್‌ಸಾಬರ ಎವಸ್ತಾ! ಆಗಿನ ಮಿತಿಗೆ ಅಂದ್ರ ಆಗಿನ ಮಿತಿಗೆ! ಲೆಕ್ಕ ಅಂದ್ರ ಲೆಕ್ಕ!

**ನಿರಾಧಾರಜಿ:**— (ದಂಗುಬಡಿದವನಂತೆ) ೭೮೧೧ ಜನ! ಸುಮಾರು ೮೦೦೦! ೯೦೦೦ ಸಾವಿರದೊಳ್ಗ ೮೦೦೦ ಜನ ಸತ್ತಿತು! ಉಳಿದದ್ದು ಎಷ್ಟು!

**ಸ್ಟಾಕಿಲ್ದಾರ:**— ಎಲ್ಲಾ ಕಡೀನೂ ಅದೇ ಹಾಡು ನೋಡ್ರಿ. ಸ್ಟಾಕ ಇಲ್ಲ! ಈ ಅಂಗ್ಡೀಯೊಳ್ಗ ಸಾಮಾನಿನ ಸ್ಟಾಕಇಲ್ಲ. ಈ ಕಡೆ ಊರಾಗ ಮಂದೀ ಸ್ಟಾಕ ಇಲ್ಲ! (ನಗೆಯಿಂದ) ಮತ್ತ ನಂ ಸಪ್ಲಾಯ್ದಾರ್ರೂ ಹೇಳಿದ್ರು, ಕಂಟ್ರೋಲ್ದಾಗೂ ಸ್ಟಾಕ ಇಲ್ಲ ಅಂತ! ಹಹ!

**ನಿರಾಧಾರಜಿ:**— ಬ್ರಹ್ಮಯ್ಯನವರೆ. ಇನರ್ ಕಂಟ್ರೋಲಿನದೂ ಸ್ಟಾಕ್ ಇಲ್ಲಾ ಅಂತ ಬರೆದುಕೊಳ್ಳಲಿಯಾ? (ಎಂದು ಒಮ್ಮೆಲೆ ಎಷ್ಟುಸಿಲ್ಲ-ವನು ಕೂಡಲೆ) ಅಯ್ಯೋ! ಕಣ್ಣಿಗೆ ಕತ್ತಲುಗಟ್ಟಿತು (ಎಂದು ಚೀರುತ್ತ ಕುರ್ಚಿಯಲ್ಲಿ ಬಿದ್ದುಕೊಳ್ಳುವನು)

[ರಂಗಸ್ಥಲದಲ್ಲಿ ಒಮ್ಮೆಲೆ ಕತ್ತಲೆ— ಅದು ಶಕ್ಯವಾಗದಿದ್ದಲ್ಲಿ ಒಂದರೆ ನಿಮಿಷ ತೆರೆಯನ್ನು ಬಿಡಬೇಕು. ಆ ಮೇಲೆ (ತೆರೆಯನ್ನೆತ್ತಿದಾಗ—) ಮೆಲ್ಲನೆ ರಂಗಸ್ಥಲದಲ್ಲಿ ಬೆಳಕು ಮೂಡುವುದು. ದೃಶ್ಯವೆಲ್ಲ ಮೊದಲಿದ್ದಂತೆಯೆ. ಆದರೆ ಟೇಬಲ್ಲಿನ ಮೇಲೆ ಒಂದೂ ಕಾಗದವಿಲ್ಲ. ನಿರಾಧಾರಜಿಯನ್ನು ಬಿಟ್ಟು ಬೇರೆ ಯಾರೂ ಇಲ್ಲ. ಅವನಾದರೂ ಕುರ್ಚಿಯಲ್ಲಿ ಬಿದ್ದು, ಮೇಜಿನ ಮೇಲೆ ಕಾಲಿಟ್ಟು ಮಲಗಿದ್ದಾನೆ... ಬೆಳಕು ಮೂಡಿದ ಒಂದರೆನಿಮಿಷದಲ್ಲಿ ತಟ್ಟನೆ ಎದ್ದು—]

**ನಿರಾಧಾರಜಿ:**— ಬರೆದುಕೊಳ್ಳಲಿಯಾ? (ಎಂದು ಕೈಯನ್ನು ಮುಂದೆ ಮಾಡಿ) ನನ್ನ ನೋಟಬುಕ್ಕಿನಲ್ಲಿ ಬರೆದುಕೊಳ್ಳಲಿಯಾ? (ಒಮ್ಮೆಲೆ ಎಚ್ಚೆತ್ತವನಂತೆ, ಕೈಯೊಳಗಿದ್ದ ಒಂದೇ ಒಂದು ಕಾಗದವನ್ನು ನೋಡಿ) ಇದೇನಿದು? ಛೆ! ಹಗಲಿನಲ್ಲಿಯೆ ನಿದ್ದೆ ಹೋಗಿ, ಕನಸನ್ನು ಕಂಡೆ! (ನಕ್ಕು) ಬಾತ್ಮೀದಾರ! ನೋಟಬುಕ್ಕು! ಹಹ! ಹಸಿದದ್ದಕ್ಕ ಹಗಲಗನಸು! ಕನಸಿನಲ್ಲಿ ಏನಾದರೂ ಬರೆದಿದ್ದರೆ ಹಾಳಾಗಿ ಹೋಗುತ್ತಿತ್ತು—ಈ ನಿನ್ನ ರೇಶನಕಾರ್ಡು! ನನ್ನ ಈ ನಂಬರಿಗೆ ಬರುತ್ತಿತ್ತು ಹೆಗಲ್ಪಾರನ ವಾರ್ಡು! ಹಹ! (ಎಂದು ಹುಚ್ಚುನಗೆ ನಗುವಾಗ—)

(ತೆರೆ)

ಬ ಕಾ ಸು ರ !

ಅರ್ಥಾತ್

ಬರದ ಬ್ರಹ್ಮರಾಕ್ಷಸ !

## ಪಾತ್ರಗಳು

ಸಂಸಾರಿಗ (ತಮ್ಮಣ್ಣರಾಯ)

ಹೆಂಡತಿ

ಹನುಮಂತ್ರಾಯ

ಹಾಳಪ್ಪ ಸೆಟ್ಟಿ

ಶೀನು (ಸಂಸಾರಿಗನ ಹಿರಿಯ ಮಗ)

## ರಂಗಸೂಚಿಕೆ

[ ಬೆಳಗಿನ ಸುಮಾರು ೭॥ ಗಂಟೆಯ ಸಮಯ. ಈಗ ಮಧ್ಯಮವರ್ಗ ಎಂದು ಕರೆಯಲ್ಪಡುತ್ತಿರುವ ದಶೆಗೆ ಸೇರಿದ ಒಬ್ಬ ಸಂಸಾರಿಗನ ಮನೆಯ ಮುಂಗೋಣೆ. ಒಂದು ಕಡೆ—ಹೊರಬಾಗಿಲ ಹತ್ತಿರ—ಕೆಲವು ಹರಕು ಮುರುಕ ಚಿಕ್ಕದೊಡ್ಡ ಚಪ್ಪಲಿಗಳು, ಒಂದು ಕಡೆ ದಾರ-ಕಾಗದಗಳ ತುಣುಕುಗಳು, ಗೋಡೆಗೆ ಮೊಳೆ ಇಲ್ಲದ ತೂತುಗಳು—ಹೀಗೆ ಎಲ್ಲವೂ ಅಸ್ತವ್ಯಸ್ತವಾಗಿ, ಅಸಹ್ಯವಾಗಿ ಕಾಣುವುದು. ಬಾಗಿಲಿಗೆ, ಹೊರಗೆ ನೋಡುತ್ತ, ಆಗಿಂದಾಗ ಒಳಗೆ ಅವಸರವಸರವಾಗಿ ನಡೆಯುತ್ತ, ಅದ ಕಾಗಿ ಒಮ್ಮೆಲೆ ಬಾಗಿಲಿಗೆ ಮತ್ತೆ ಧಾವಿಸುತ್ತ ಸಂಸಾರಿಗನು ಚಡಪಡಿಕೆಯ ಮನೋವೃತ್ತಿಯಲ್ಲಿ ಇಡಿಯ ರಂಗಭೂಮಿಯನ್ನೆ ತುಂಬಿದ್ದಾನೆ, ಹೀಗೆ ಬಾಗಿಲಿಗೆ ಬಂದ ಒಂದು ಸಮಯದಲ್ಲಿ ಹೊರಗೆ ಯಾರನ್ನೊ ಕರೆಯುವನು. ಈ ಹೊಸಬನು ವೃತ್ತಪತ್ರಗಳನ್ನು ಮಾರುವವನೆಂಬುದು ಪ್ರಾರಂಭದ ಸಂಭಾಷಣದಿಂದ ತಿಳಿಯುವುದು. ಹೊರಗಿನ ಮಾತು ತೀರ ಅಸ್ಪಷ್ಟವಾಗಿರುವಂತೆ ನಟಿಸಬೇಕು. ಶಬ್ದ ಕೇಳುವುದು, ಒಂದೂ ಅಕ್ಷರ ವಿಂಗಡವಾಗುವಂತಿಲ್ಲ—ಹೀಗಿಟ್ಟು ಸಂದರ್ಭವನ್ನೆಲ್ಲ ಸಂಸಾರಿಗನು ತನ್ನ ನಟನೆಯಿಂದಲೆ ತಿಳುಹಿಸಿಕೊಡಬೇಕು. ]

**ಸಂಸಾರಿಗ** :— ಎಷ್ಟು ತಡ ಮಾಡಿದ್ಯೊ!....ಏನದ ಸುದ್ದಿ?.... ಏನು? ಈವತ್ತಿನಿಂದ ಎರಡಾಣೇನ?.... ಆ ಸುದ್ದಿ ಅಲ್ಲೊ?....ಯುದ್ಧದ ಸುದ್ದಿ?.... ಏ.... ಬಾ ಇಲ್ಲಿ!.... ೨ ಆಣೆ ಇರಲಿ ೧೨ ಆಣೆ ಇರಲಿ— ಪೇಪರು ಕೊಟ್ಟು ಹೋಗು....ಅಕ್ಕಿ ಸಿಗ್ತಾವೇನು—ಆಂ?....ನಿನಗ ಕೇಳ್ತೀನೊ ಖಾಸಗಿ ಸುದ್ದಿ! .... ಪೇಪರಿನೊಳಗ ಕೊಡೋ ಸುದ್ದಿ ಅಲ್ಲ—ಹ ಹ ಹ! [ ಎಂದು ನಗುತ್ತ ಒಳಗೆ ನಡೆದು ಬಂದು ಅವಸರವಸರವಾಗಿ ಅದನ್ನು ಸರಿಮಾಡಿ ಓದಬೇಕೆನ್ನುವಷ್ಟರಲ್ಲಿ—]

**ಹೆಂಡತಿ** :— (ಬಂದು) ಹಾಲಿನವ ನಾಳೆಗನೇ ತಾರೀಕಿನಿಂದ ಇನ್ನೂ ಒಂದು ಸೇರು ಕಡಮೆ ಮಾಡ್ತಾನಂತ—(ಗಂಡನ ಲಕ್ಷ್ಯವಿಲ್ಲದ್ದನ್ನು ನೋಡಿ, ಗಟ್ಟಿಯಾಗಿ) **ಕೇಳಿಸಿತೇನು?** ಮಾಡಲಿ ಅಹುದಲ್ಲೊ?

**ಸಂಸಾರಿಗ**:— (ಒಮ್ಮೆಲೆ ಎಚ್ಚತ್ತವನಂತೆ) ಆಂ? ಏನ್ಮಾಡ್ತೀ? ನಿನಗಂತೂ ದಿನಾ ಅದನ್ಮಾಡಲಿ ಇದನ್ಮಾಡಲಿ ಅಂತ—

**ಹೆಂಡತಿ** :— (ನಡುವೆಯೆ) ಅಯ್ಯ! (ತಿಳುಹಿಸಿ ಹೇಳುವಂತೆ) ಹಾಲಿನವ.... (ಎಂದು ಅದನ್ನೆ ಮತ್ತೆ ಹೇಳುವಳು.)

**ಸಂಸಾರಿಗ** :— (ಚಕಿತನಾಗಿ) ಕಡಮೆ? ಕಡಮೆ ಯಾಕ? ಅಷ್ಟ್ಯಾ ಬೇಕಾಗ್ತದಂತ ಹೇಳು—

**ಹೆಂಡತಿ** :—(ತಿರಸ್ಕಾರದಿಂದ ಉಸಿರೆಳೆದು) ಕಡಮೆ ಅಂದ್ರ ನಮಗ ಕೊಡೋದ್ರೊಳಗ ಕಡಮೆ ಅಲ್ಲ—ಧಾರಣೀವಳ್ಗ—

**ಸಂಸಾರಿಗ** :— (ಮೋಲಿನಂತೆ) ಧಾರಣೀವಳ್ಗ? ಹೆ! ಹುಚ್ಚಿದ್ದಾನೇನವ? ಹೇಳಲ್ಲ ಅವನಿಗೆ—ಬೇಕಾದ್ರ ಇನ್ನೂ ೧-೨ ಸೇರು ಹೆಚ್ಚು ತೊಗೋತೀವಿ ಅಂತ—

**ಹೆಂಡತಿ** :—(ಬೇಜಾರಿನ ದನಿಯಲ್ಲಿ) ಅಂವ ಹುಚ್ಚೊ ಯಾರು ಹುಚ್ರೊ! ಧಾರಣಿ ಎಲ್ಲಾ ಕಡೀನೂ ಇಳಿದದೆ — ಹಾಲು ಚಲೋ ಇರ್‍ತದೆ— ಹ್ಯಾಂಗ್ಯಾಕಾಗವಲ್ಲದು ಅವನೇ ಕೊಡವಲ್ಲನ್ಯಾಕ, ಒಂದರ್ಧಸೇರು ಕಡಿಮೆ ತೊಗೊಂಡರೂ ನಡೀತದೆ ಅಂತ ನಾ ಹೇಳ್ಬೇಕಂದ್ರ—ಒಂದೆ. ರಡು ಸೇರು ಹೆಚ್ಚಿಗೆ ತೊಗೊಳ್ಳೋದೂ ಅಂತ!

**ಸಂಸಾರಿಗ**:— (ಸಿಟ್ಟು ತಡೆಯದೆ) ಏ!.... ಸುರಳೀತ ಜಗತ್ತು ನಡೆದಾಗ ಸರಿಯಾಗಿ ವ್ಯವಹಾರ ತಿಳಿಯೋದಿಲ್ಲ ನಿಮಗೆ.... ಈಗಂತೂ ಶಕ್ಯನೇ ಅಲ್ಲ....ಯುದ್ಧ ನಡೆದಿದೆ ಯುದ್ಧ, ಅದಾದರೂ ಗೊತ್ತದನೊ ಇಲ್ಲೊ?

**ಹೆಂಡತಿ**:— ಗೊತ್ತಿರದೇ ಏನು? (ಹಿರಿತನದಿಂದ).... ನಮ್ಮ ಮನೀಗೆ ಏನು ಹೊಸದಲ್ಲ—

**ಸಂಸಾರಿಗ** :— (ಮಾತು ಬದಲಾಯಿಸುದ ದನಿಯಲ್ಲಿ) ಹೊಸದಿರಲಿ, ಹಳೇದಿರಲಿ ....ಇಂದಿನ ದಿವಸ್ದಾಗ ಯಾವ್ದು ಎಷ್ಟು ಸಿಗತದ ಅಷ್ಟು ತಕ್ಕೊಂಡು ಇಡೋದು ಬುದ್ಧಿವಂತಿಕೇ ಲಕ್ಷಣ. (ಎಂದು ಮಾತು ಮುಗಿಸಿದವನಂತೆ ಎದೆ ಸೆಟಸಿ ಪೇಪರನ್ನು ಓದಬೇಕೆನುವಷ್ಟರಲ್ಲಿ—)

**ಹೆಂಡತಿ** :— (ತುಸು ಸಿಟ್ಟಿನದನಿಯಲ್ಲಿ) ಅಯ್ಯ! ಯಾವ್ದು ಎಷ್ಟು ಸಿಗ್ತದ ಅನ್ನತಾ ಹಾಲಿನದೂ ಹೌದು ಕಟ್ಟಿಸ್ತೀರೇನಿನ್ನ? ... 'ಯಾವ್ದು

ಎಷ್ಟು ಸಿಗ್ತದ' ಅಂತ! ಮನೆಯೊಳಗೇನು ಬೆಳೆದ ಮಕ್ಕಳ್ಳೆ, ಮದಿ-ವೆಯೆ, ಮುಂಜಿಯೆ—ಏನಿಲ್ಲ–ಸುಮ್ಸುಮ್ನ ೪ ವರ್ಷ ನಾಲ್ಕೋವಷ್ಟು ಅಕ್ಕಿ ತಂದಿರಿ, ಹೋದಾಗ–ಬಂದಾಗೊಮ್ಮೆ ತಂದು ತಂದು ಜೋಳ ೭–೮ ಚೀಲದಷ್ಟಾಗೇದ—ಗೋದಿ ಅಂತೂ ಮೊಮ್ಮಕ್ಕಳ ಮದಿವೀ ತನಕ ನಡೀಬಹುದು

**ಸಂಸಾರಿಗ :—** (ಹಂಗಿಸುವ ದನಿಯಲ್ಲಿ) ನಿನ್ನ ತವರ್ಮನೀದೇನು ದುಡ್ಡು ತಂದಿಲ್ಲಲಾ ತಕರಾರು ಮಾಡ್ಲಿಕ್ಕೆ ?

**ಹೆಂಡತಿ :—** ದುಡ್ಡಿನ ಮಾತು ಬಿಟ್ಟು ನನ್ನ ತವರ್ಮನೆ ನಿಮಗ ನೆನಪಾ-ಗೋದೂ ಅಪ್ಟರಾಗೇ ಇದೆ....ನಮ್ಮ ಮನೆ ಅಂಬೋದಾದೂ ಉಳೀಲಿ ಅಂತ—

**ಸಂಸಾರಿಗ :—** (ತಿಳಿಯದ್ದಕ್ಕೆ ಸಿಟ್ಟಿನಿಂದ) ಏನಂದಿ ?

**ಹೆಂಡತಿ :—** (ಕನಲಿ) ನಮ್ಮ ಮನೆ ಅಂಬೋದಾದ್ರೂ ನಂ ಪಾಲಿಗೆ ಉಳೀಲಿ ಅಂದೆ! ಇರಲಿಕ್ಕೆ ಸಹಿತ ಜಾಗೆ ಇಲ್ಲಧಾಂಗ ಆಗೇದ, ಬಂದವ್ರು ಹೋದವ್ರು ಕೂಡೋದು ಅಕ್ಕಿ ಚೀಲದಮ್ಯಾಲೆ! ಹುಡುಗರು ಮಲ-ಗೋದು ಜೋಳದ ಮಗ್ಗಲ್ಹಾಸಿಗೆಯ ಮ್ಯಾಲೆ! ಇನ್ನು ಹಾಲಿನ್ದೂ ಒಂದು ಸಮುದ್ರ ಮಾಡಿದಿರಿ ಅಂದ್ರ—

**ಸಂಸಾರಿಗ :—** ಅದರೊಳಗ ನೀನು— ಕ್ಷೀರಸಾಗರದೊಳಗ ಲಕ್ಷ್ಮೀಹಾಂಗ ಹಂ. (ಎಂದು ತಿರಸ್ಕಾರದಿಂದ ಉಸಿರೆಳೆಯುವನು). (ಹೆಂಡತಿ ಏನನ್ನೊ ಹೇಳಬೇಕೆನ್ನುವಷ್ಟರಲ್ಲಿ) ಮುಂಚೆ ಹಾಲು ತೊಗೊ ಹೋಗು! (ಹೆಂಡತಿ ಒಳಗೆ ಹೋಗಲು) ಇಂಥಾ ಹೆಂಗ್ಸರ್ನ ಕಟ್ಕೊಂಡು ಈ ಯುದ್ಧ ಪಾರಾ-ದರೆ ಸಾಕು, ಸಂಸಾರ ಯುದ್ಧದ ಮಾತು ದೂರಿರಲಿ. (ಎನ್ನುತ್ತ ಪೇಪರನ್ನು ಓದಬೇಕೆಂದು ಎತ್ತಿ ಹಿಡಿವಾಗ, ಹೊರಬಾಗಿಲಿನಿಂದ ಯಾರೊ ಬರುವುದನ್ನು ನೋಡಿದಂತೆ ಮಾಡಿ—) ಯಾರು ? (ಎಂದು ಚಕಿತನಾದವ ನಂತೆ ಬಾಗಿಲಿಗೆ ನಡೆದು ಬಂದು) ಹಿಂದಿನೋಣಿಯ ಹನುಮಂತರಾಯ! ಹೀಂಗ್ಯಾಕ ಧಾವಿಸ್ತಾನ ? ಮತ್ತೇನಾ—ಏನ್ರಿ ಹನ್ಮಂತರಾಯ್ರು—

**ಹನುಮಂತ್ರಾಯ :—**( ಅವಸರದಿಂದ ಬಂದುದಕ್ಕಾಗಿ ಉಸಿರು ಸಾಲದಿದ್ದರೂ ಸಂತೋಷ ಉಕ್ಕೇರುತ್ತ) ನೋ-ನೋ-ನೋಡಿದ್ರಾ ? ಸಾ ಎಂದಿನಿಂದಲೇ

ಹೇಳಿದ್ದೆ? ಹೊಡೆದ್ರು ರಶಿಯಾದವ್ರು ಹಿಟ್ಲರನನ್ನು! ಇಂದಿಲ್ಲ ನಾಳೆ ಇವರೇ ಗೆದಿಯೋವ್ರು ಅಂತ—

**ಸಂಸಾರಿಗ** :— (ಹೆದರಿದವನಂತೆ) ಏನಂದ್ರಿ? (ಪೇಪರು ನೋಡುತ್ತ) ಹಿಟ್ಲರನ್ನ—(ಅತ್ತಿತ್ತ 'ಕಾಲಂ'ಗಳಲ್ಲಿ ಕಣ್ಣು ಹೊರಳಿಸುತ್ತ) ಹಿಟ್ಲರನ್ನ ರಶಿಯಾವವ್ರು— (ಒಮ್ಮೆಲೆ ನೋಡಿ) ಹೌದಲ್ಲ! (ಗಾಬರಿಯ ದನಿಯಲ್ಲಿ) ಅಯ್ಯೊ! ಕಡೆಗೂ ಅನರ್ಥ! (ಎನ್ನುತ್ತ ದಂಗುಬಡೆದವನಂತೆ ಕುಳಿತು ಕೊಳ್ಳುವನು).

**ಹನುಮಂತ್ರಾಯ**:— (ಏನೂ ತಿಳಿಯದೆ, ಬೆಪ್ಪಾಗಿ) ಏನ್ರಿ? ರಶಿಯಾ— (ತಿಳುಹಿಸುವವನಂತೆ) ರಶಿಯಾ ಅಂದ್ರ ನಮ್ಮ ಕಡೆಯವ್ರು—ಅವರು ಗೆದ್ದರೆ— (ಎನ್ನುತ್ತ ಕುತೂಹಲದಿಂದ ಸಂಸಾರಿಗನನ್ನು ನೋಡುತ್ತ ಕುಳಿತು ಕೊಳ್ಳುವನು).

**ಸಂಸಾರಿಗ**:— (ಪೇಪರನ್ನು ಮಡಿಚುತ್ತ) ಅದಲ್ಲ — ಹನ್ಮಂತ್ರಾಯಾ — ನಾ ಹೇಳೋದು. ರಶಿಯಾ ಆಯ್ತು, ಜರ್ಮನಿ ಆಯ್ತು, ಹಾಳಾಗಿ ಹೋಗವೊಲ್ಲರ್ಯಾಕ! ನಂ ಗತಿ ಏನೂ ಅಂತ—

**ಹನುಮಂತ್ರಾಯ** :— (ಇನ್ನೂ ತಿಳಿಯದೆ) ಈ ನಾ ಹೇಳೋ ರಶಿಯಾ ಯುರೋಪದೊಳಗ ಅದ—

**ಸಂಸಾರಿಗ**:— (ನಡುವೆಯೆ) ಏ — ಧಡ್ಡ ನೀನು ಹನುಮಂತ್ರಾಯಾ! ಯುರೋಪ ಆಯ್ತು, ಯಾರಪ್ಪೇ ಆಯ್ತು — ಹೀಂಗ ಹಿಟ್ಲರ್ ಹಣ್ಣಾದ್ರ ಜಪಾನರು ಸುಂ ಕೂಡ್ತಾರೇ? ಹಿಟ್ಲರು ಅವರಿಗೆ ಕೂಡಗೊಟ್ಟಾನೇನೊ? ಇದೆಲ್ಲಾ ಆಟ ಅದ....ಆ ಠಕ್ಕನ ತಂತ್ರ ಅದ.... 'ಈ ಕಡೆ ನಾ ರಶಿಯಾನ್ನ ಮುಂದ್ಮುಂದ ಎಳೀತೀನಿ ಮಾರೀಚಪ್ಪಗ ರಾಮನ್ನ ಎಳದ್ಹಾಂಗ, ಅಲ್ಲಿಂದ ನೀವು ಕೈ ತೋರಿಸರಿ' ಅಂತ ಜಪಾನರಿಗೆ ಹೇಳಿಟ್ಟಾನ ಆ ಕಳ್ಳ ಹಿಟ್ಲರ್! ಬಂತು—ಹನುಮಂತ್ರಾಯಾ—ಹಿಂದುಸ್ತಾನದ ಮ್ಯಾಲೆ ದಾಳಿ ಬಂತು ಅಂದೆ—

**ಹನುಮಂತ್ರಾಯ**:— (ಉಸಿರೆಳೆದು ನಕ್ಕು) ಅಯ್ಯೊ ರಾಮಾ! ನಿಮ್ಮದಂತೂ ಪ್ರತಿಯೊಂದಕೂ—

**ಸಂಸಾರಿಗ** :— (ಲಕ್ಷ್ಯ ಇಲ್ದೆ, ತನ್ನಷ್ಟಕ್ಕೆ ಎಂಬಂತೆ) ದಾಳಿ ಬಂತು ಅಂದೆ! ಇಂಥಾದ್ದ ಬೇಕು ಅನುಭವ! (ಒಳಗೆ ನೋಡುತ್ತ) ರಾಮ್ಯಾ. ಭೀಮ್ಯಾ, ಸುಬ್ಬಣ್ಣಾ — ವಸಂತಾ — ಏ ನಾರ್‍ಯಾ—ಯಂಕ್ಯಾ — ಶೀನ್ಯಾ— ಏ ಒಬ್ರೂ ಇಲ್ಲೇನ್ರ್ಯೊ? ಎಲ್ಲಿಗೆ ಕಳುಹಿಸಿದಿ ಅವರ್‍ನ ಸಾಯ್ಲಿಕ್ಕೆ?

**ಹೆಂಡತಿ** :— (ಬಂದು) ನಾ ಯಾಕ್ಕಳಿಸ್ಲಿ? ಒಬ್ಬ ಚಿಮಣಿ ಎಣ್ಣೆ ತರಲಿಕ್ಕೆ ಹೋಗ್ಯಾನ–ಇಬ್ರು ಹೋಗ್ಯಾರ ಸಕ್ರಿ ತರ್‍ಲಿಕ್ಕೆ–ಇಬ್ರು ಬೆಲ್ಲದ ಅಂಗಡಿಗೆ–ಶೀನೂನೊ ಯಂಕನೊ ಅಕ್ಕಿಗೇ ಅಂತ– (ಹನುಮಂತರಾಯನನ್ನ ನೋಡಿ ಒಮ್ಮೆಲೆ ತಡೆಯುವಳು.)

**ಹನುಮಂತ್ರಾಯ** :— (ಬೆರಗಾದವನಂತೆ ನೋಡುತ್ತ) ಲನೇ ಸೈನ್ಯಕ್ಕಿಂತ ನಿಮ್ಮ ಮಕ್ಕಳ ಸೈನ್ಯದ ಕವಾಯಿತು ಜೋರು ಕಾಣಿಸ್ತದ! ಹಹ!

**ಹೆಂಡತಿ** ;— (ಸಮಯ ಸಾಧಿಸಿತೆಂಬಂತೆ) ಹೀಂಗೇ ನೋಡ್ರಿ, ದಿನಾ ಮುಂಜಾನೆದ್ದು ಹುಡುಗ್ರನ್ನ ಹೊಡೆದೆಬ್ಬಿ ಕಳಿಸ್ತಾರ. ಅಂಗ್ಡಿಂಗ್ಡಿ ತಿರುಗ್ತಿರ್‍ಗಿ ಸಾಮಾನ್ತಂದ್ಹಾಕೋದ್ರಾಗ ಸಾಲೀನೇ ಬಿಡಿಸಿಧಾಂಗಾಗೇದ ಹುಡುಗ್ರನ್ನ! (ಸಂಸಾರಿಗ ಸಿಟ್ಟಿನಿಂದ ತನ್ನನ್ನು ದಿಟ್ಟಿಸಲು) ತಲೀ ಮ್ಯಾಲಿ ಸಾಮಾನ್ಹೊತ್ಕೊಳ್ಳೋ ಪಾಳಿ ಇನ್ನೂ ಮನೀ ಹೆಂಗ್ಸರಿಗೆ ಬಂದಿಲ್ಲ— ಇಷ್ಟೇ ಸುದೈವ ಅಂತೀನಿ (ಎನ್ನುತ್ತ ಒಳಗೆ ಹೋಗುವಳು.).

**ಹನುಮಂತ್ರಾಯ** :— (ಮುಗುಳ್ನಗೆಯಿಂದ) ಇದೇನ್ಮೋಜು ನಡೆಸಿಬಿಟ್ಟೀರಿ?

**ಸಂಸಾರಿಗ** :— (ಅನುಭವದ ಹಿರಿತನದಿಂದ) ಅಪಾ-ಅದು ಸಂಸಾರ! ಕಲಿಯುಗದಾಗ ಹುಟ್ಟಿದ್ದ ಈ ಕಾರಭಾರ! (ಎನ್ನುತ್ತ ಏಳುವನು)

**ಹನುಮಂತ್ರಾಯ** :— ಮತ್ತೇನಾದ್ರೂ ಅಂಗಡಿ ತೆಗೆಯೋ ವಿಚಾರ ಅದೆ ಏನು; ತಮ್ಮಣರಾಯರೇ ?

**ಸಂಸಾರಿಗ** :— (ಅತ್ತಿತ್ತ ತಿರುಗಾಡುವುದನ್ನು ತಡೆದು, ಅವನನ್ನು ದಿಟ್ಟಿಸಿ) ಅಂಗಡಿ! ಮತ್ತೆ ಯಾಕೆ ಹೊಸಾ ಅಂಗಡಿ ಹಾಕಲಿ?—ದೇವರು ಕೊಟ್ಟ ಅಂಗ್ಡೀನೇ ಸಾಕಾಗಿ ಹೋಗೇದ! (ಬೆನ್ನಿಗೆ ಕೈಕಟ್ಟಿ ತಿರುಗಾಡುತ್ತ) ಸಾಕಾಗಿ ಹೋಗೇದ, ಅಂದೆ....ಸುಳ್ಳಲ್ಲ, ಹನುಮಂತ್ರಾಯಾ.... ಸಾಮಾನಿನ ಅಂಗ್ಡೀ ಮ್ಯಾಲೆ ಸರ್ಕಾರದ ಬದಲು ಸಂಸಾರದ ಅಂಗ್ಡೀ

ಮ್ಯಾಲೆ ದೇವರೇ ಕಂಟ್ರೋಲ್ ಹಾಕಿದ್ರೆ ಎಷ್ಟು ಅನುಕೂಲ ಆಗ್ತಿತ್ತೊ ಅಂತೀಯು? ಅದೇ ಈಗ ನೋಡು, ಈ ಸಂಸಾರ್ದ ಅಂಗ್ಡೀಗೆ ಹೆಸರಿನ ಮಾಲಕ ನಾನು, ಗಂಟು ನನ್ದು; ಗಿರಾಕಿಗಳು ಅಂದ್ರ ಹೆಂಡತಿ-ಮಕ್ಕಳು ಆದೂ ನನ್ದೇ ಗಂಟು—ಬಿದ್ದಗಂಟು! ವ್ಯಾಪಾರ, ಉದ್ದರಿ; ವಸೂಲಿ ಸತ್ತಮ್ಯಾಲೆ—ಅವರಲ್ಲ ನಾನು ಸತ್ತ ಮ್ಯಾಲೆ!

**ಹನುಮಂತ್ರಾಯ** :— (ನಗುತ್ತ) ಆದಿರ್ಲಿ. ತಮ್ಮಣ್ಣಾರಾಯ್ರ; ಈಗ ನೀವು ಹೀಂಗ ಸಾಮಾನು ಕೂಡಿ ಹಾಕೋದ್ಕ ಏನ್ಸಂಬಂಧಾ—ಅಂತೀನಿ....

**ಸಂಸಾರಿಗ** :— (ಒಮ್ಮೆಲೆ ತಿರುಗಿ) ಏನ್ಸಂಬಂಧ? ನಾಳೆ ಕೂಳಿಲ್ದೆ ಸತ್ತರೂ ಅಂದ್ರ, ಮತ್ತೆ ನನ್ನ ಮ್ಯಾಲೆ ಸಂಶಯ, ನನ್ನ ಮ್ಯಾಲೆ ಖಟ್ಲೆ! ಈಗ ನೋಡಿದಿಲ್ಲೊ? ಧಡ್ಡ ರಂಡೇವು ಬಂಗಾಲದಾಗ ಹ್ಯಾಂಗ ಪಟಪಟಾ ಸತ್ತು ಹೋದುವು! ದೊರೆಯೊವಾಗ ಸಾಮಾನು ಕೊಂಡ್ಕಾಕಿದ್ರ ಯಾಕೆ ಸಾಯ್ತಿದ್ರು ಹೇಳು?

**ಹನುಮಂತ್ರಾಯ** :— (ನಗೆಯಿಂದ) ಅಲ್ಲಿ ಅವರು ಉಪವಾಸ ಸತ್ತರೂ ಅಂತ ಇಲ್ಲಿ ನಾವು ಹೊಟ್ಟೆಭಾರ ಆಗಿ ಸಾಯ್ಬೇಕು ಅಂತೀರಲ್ಲ? ಹಹ! ತಿಂದು ಹೊಟ್ಟೆ ಬಿರಿಯೋ Second front (ಸೆಕಂಡ ಫ್ರಂಟ) ಹೂಡ್ತಿರಿ ಅನ್ರಿ....ಹಹ!

**ಸಂಸಾರಿಗ** :— ಏನೇ ಇರ್ಲಿ— (ಮುಂದೆ ನೋಡಿ) ಹಂಹಂ—ಕಪ್ಪು-ಬಸಿ ಒಡವಗಡಿದೀಯು! (ಹಣಮಂತ್ರಾಯನಿಗೆ) ಎಲ್ಲಿ ಇವರು ಕಪ್ಪು-ಬಸಿ ಒಡೀತಾರೋ ಅನ್ನೋ ಸಂಕಟಕ್ಕ ನನಗ ಚಹಾನೇ ಬ್ಯಾಡ ಅನಿಸ್ತದ.

**ಹೆಂಡತಿ** : — (ಎರಡು ಕಪ್ಪು-ಬಸಿಗಳಲ್ಲಿ ಚಹವನ್ನು ತಂದು) ನಿಮಗ ಬ್ಯಾಡಾದ್ರ ಮನೀಗೆ ಬರೋವ್ರಿಗೂ ಹೋಗವ್ರಿಗೂ ಬ್ಯಾಡ ಅಂತೀರೇನೋ ಈ ಕಪ್ಪು ನಿಮ್ದು....ನೀವೇನೂ ಮನಸ್ಗೆ ಹಚ್ಚಿಕೋಬ್ಯಾಡ್ರಿ....ನಿಮ್ದಕ್ಕ ಹಾಲು ಕಡಿಮೆ, ಸಕ್ಕರೆ ಅಂತೂ ಇಲ್ಲೇ ಇಲ್ಲ!(ಇಬ್ಬರಿಗೂ ಕೊಡುವಳು)

**ಸಂಸಾರಿಗ** :— (ಕುದಿದು ಮುಖವನ್ನು ಕಿವುಚಿ) ಯುದ್ಧದ ಕಾಲೊಳಗ ಹೀಂಗ ಅಂದಾ-ದುಂದಿ ಮಾಡೋ ನೀನು ಇಂಗ್ಲಂಡಿನಾಗ ಹುಟ್ಟಿದ್ದರ ಜೇಲಿಗೆ ಹಾಕತಿದ್ರು. (ಹ. ನನ್ನು ಸುಳ್ಳುನಗೆಯಿಂದ ನೋಡುತ್ತ) ಹೌದಲ್ಲೊ?

**ಹೆಂಡತಿ** :— ನಿಮ್ಮನೀ ಸೇರಿದ್ದು ಅದೇ ಭಾಗ್ಯನೇ ದೊರೀತಲ್ಲ! (ನೆಡಸಿಸಿಂದ ಹೋಗುವಳು)

[ 'ತಮ್ಮಣರಾಯರು ಅದಾರೇನ್ರಿ' ? ಎಂಬ ಹೊರಬಾಗಿಲಿನಿಂದ ದನಿ.]

**ಸಂಸಾರಿಗ** :— (ಅದನ್ನು ಕೇಳಿ) ಹಂ—(ಹ ನಿಗೆ) ಬಂದ ಇವ ಹಾಳಪ್ಪಸೆಟ್ಟಿ! ಸಾಮಾನು ಇಲ್ಲೇ ಇಲ್ಲ ಅಂಗ್ಡೀವಳಗ ಅಂತಾನೋ ಏನೋ, ಮಹಾರಾಯ! (ಗಟ್ಟಿಯಾಗಿ) ಬಾ—ಸೆಟ್ಟೀ—ಇನ್ನೂ ಇದ್ದೀನಿ ಬಾ....

**ಹಾಳಪ್ಪಶೆಟ್ಟಿ** :— (ಬಂದು) ಶರಣ್ರಿ—

**ಸಂಸಾರಿಗ** :— ಕೂಡು, ಸೆಟ್ಟೀ....ಎಲಿ ನಿನ! ಮ್ಯಾಲೆ ಬಾ.... ಹೀಂಗ ಬಾರೊ....ಬೇಕಂತ್ಲೇ ಕೆಳಗ ಕೂತರ ನೀನು ಲಕ್ಷಗಟ್ಲೆ ಫಾಯಿದೆ (=ಲಾಭ) ಹೊಡೆದದ್ದು ಸುಳ್ಳು ಅಂತ ತಿಳಿದಾರು ಅಂತ ಆಶಾ ಏನು ? (ಸ. ನಿಗೆ) ನಮ್ಮ ಹಾಳಪ್ಪಸೆಟ್ಟಿ ಈಗ ಹಗೇದೊಳ್ಗ ಕಾಳಿನ ಬದಲು ರೊಕ್ಕ ಇಡ್ತಾನೆ ಅಂದೆ, ರೊಕ್ಕ....ಹಹ!

**ಹಾಳಪ್ಪಶೆಟ್ಟಿ** :— ಹೇಳಿಕೇಳಿ ಕಾಗದ ಲೋಟ.... ಗಾಳಿಗೆ ಹಾರ್ಬ್ಯಾರದ್ದು ಅಂದ್‍ಕ್ಯಾಶಿ ಹಗೇದಾಗಿಟ್ರೊ ತೆಪ್ಪೇನು? ಯಾಕ್ರಿ, ಅನ್ಮಂತ್ರಾಯ್ರ?

**ಹನುಮಂತ್ರಾಯ** : (ನಗೆಯಿಂದ) ನನಗೇನ್ಗೊತ್ತು, ಸೆಟ್ಟಿ? ಇಂದೊ ನಾಳೆಯೊ ಹಗೇದೊಳ್ಗ ಬಿದ್ದ ಮ್ಯಾಲೆ ನನ್ಗ ಗೊತ್ತಾಗೋದು ಹಗೆ ಅಂದ್ರ ಏನು ಅಂತ....ತಮ್ಮಣರಾಯರ್ಹಾಂಗ ಕಾಳು ಕೂಡಿಸಿಲ್ಲ, ನಿನ್ಹಾಂಗ ನೋಟು ಕೂಡಿಸಿಲ್ಲ.. ಅದ್ಕೇ ನೋಡ್ತ್ಯಾರ್ದ್ದ, ಮುಂಜಾನೆದ್ದು ರಶಿಯಾದವ್ರು ಹಿಟ್ಲರನ್ನ ಹಿಂದೋಡಿಸಿದ್ರು ಅಂತ ಸಂತೋಷ ಹಚ್ಕೊಂಡು ಬಂದೀ—

**ಹಾಳಪ್ಪಶೆಟ್ಟಿ** :— ಹಿಟ್ಲರನ್ನ ಹಿಂದೋಡಿಸಿದರ್ರಿ? ಅಂದ್ರ ಮತ್ತ ಧಾರಣಿ ಏರಾಕ ಬೇಕು, ಹಾಂಗಾದ್ರ?

**ಸಂಸಾರಿಗ** :— (ನಗೆಯಿಂದ) ಇನ್ನೇನು ನಿನ್ನ ಧಾರಣಿ ಸ್ವರ್ಗಕ್ಕೇ ಏರಿಸುವವನೊ ಏನ್ನೀನು, ಸೆಟ್ಟಿ? ಹಾಂಗ್ಮಾಡಿದ್ರ ಅದನ್ನ ಹಿಡೀಲಿಕ್ಕೆ ನಾವೂ ಸ್ವರ್ಗಕ್ಕೇ—

**ಹಾಳಪ್ಪಶೆಟ್ಟಿ** :— ನಾಯೆಲ್ಲಿ ಏರಿಸಾಕ ಕುಂತೀನರಿ? ಅಂಗ್ಡೀವಳ್ಗ ಮಾಲು ಇದ್ದವ್ರ ಮಾತದು.... ಮಾಲು ಬಂದು ಬಿದ್ದೇತಿ ಅಲ್ಲಿ, ಇಲ್ಲಿ ಕೈಯಾಗ

ರೊಕ್ಕ ಇಲ್ಲ....ಅದ್ಕೇ ಹರೇದಾಗೆದ್ದು ಬಂದ್ನಿರಿ ನಿಂಕಡೆ, ಒಂತುಸು-ಮಟಾರಿ ಲೆಕ್ಕ ಕೊಟ್ಟೇರಿ ಅಂತ —

**ಸಂಸಾರಿಗ:**—(ಗಾಂಭೀರ್ಯದಿಂದ) ಲೆಕ್ಕ ? ಹಂ—ಕೊಡ್ತೀನಿ, ಸೆಟ್ರೆ.... (ವಿಚಾರ ಮಾಡುವವನಂತೆ) ಅಂದ್ರ ಹೀಂಗ್ಮಾಡು, ಇನ್ನೊಂದಿಷ್ಟು ಸಾಮಾನು ತರೋದಿದೆ—ನಮ್ಮುಡುಗ ಬಂದ್ಮ್ಯಾಲೆ ಕಳಿಸ್ತೊಡ್ತೀನಿ....ಅದ್ನ ಅದ್ನ ಕೂಡೇ ಕೊಟ್ಟು ಬಿಡ್ತೀನಿ....(ಒಳಗೆ ನೋಡಿ) ಏ—ಚಹ ಆಯಿತೋ ಇಲ್ಲೋ ? ಮೂರು ಕಪ್ಪು—ಸಂ ಸೆಟ್ರು ಬಂದಾರ—

**ಹಾಳಪ್ಪಸೆಟ್ಟಿ** :— ಏಲೆ ! ಭಾ ಬ್ಯಾಡ್ರಿ—

**ಸಂಸಾರಿಗ** : — (ನಕ್ಕು) ಇರ್ಲಿ, ಸೆಟ್ರೇ, ನಿನ್ನ ಸಲುವಾಗಿ ಏನು ಸ್ಪೇಶಲ್ ಮಾಡಿಸಿಲ್ಲ....ಇದು ಚಹ ಕುಡಿಯೋ ಸಂ ವ್ಯಾಳ್ಯಾ —

**ಹಾಳಪ್ಪಸೆಟ್ಟಿ** :— (ಎದ್ದು) ಇಲ್ರಿ—ಹೋಗಾಕ್ಬೇಕಾಗೇತಿ—ಮತ್ತ ಹುಡುಗನ್ನ ಗಡಾನೆ ಕಳಿಸಿಬಿಡ್ರಿ-ಲೆಕ್ಕಾನೂ ಕೊಟ್ಟು... .ಶರಣ್ರಿ— ( ಹೋಗುವನು )

**ಹನುಮಂತ್ರಾಯ** :— (ಹಸಿತ್ತ) ನೀವಿನ್ನ ಹೀಂಗೇ ಸಾಮಾನು ತರಿಸಿದರ ನಿಮ್ಮನೆಯವರು ಹೇಳೋ ಹಾಂಗ ಒಳಗ ಸಾಮಾನು ತುಂಬಿ, ನೀವು ಹೊರಗೇ ಬರಬೇಕಾದೀತು....ಹ ಹ!

**ಸಂಸಾರಿಗ** :— (ಉಸುರ್ಗರೆದು) ಮತ್ತೇನ್ಲೀದು ತರಿಸೋದು ? ಲೆಕ್ಕದ ಮಾತು ತೆಗೆದ ಸೆಟ್ರೆ, ಅದನ್ನು ಮುಂದ್ಹಾಕೋ ಲೆಕ್ಕ ನಾ ಹೇಳ್ದೆ.... ( ಹತ್ತಿರ ಬಾಡು ಮೆಲುದನಿಯಿಂದ ) ಸದ್ಯಕ್ಕಂತೂ ಎರಡು ವರ್ಷದ ವ್ಯವಸ್ಥಾ ಆಗೇದ ಅನ್ನಲಿಕ್ಕೆ ಅಡ್ಡಿ ಇಲ್ಲ—ಅಲ್ಲ ಸಹಜ ಹೇಳಿದೆ, ಯಾರ್ಮುಂದ ಹೇಳೋ ಮಾತಲ್ಲ ಇದು.

**ಹನುಮಂತ್ರಾಯ** :— (ದಂಗು ಬಡಿದವನಂತೆ) ಎರಡು ವರ್ಷ ! ( ವಿಚಾರ ಮಗ್ನನಾದವನಂತೆ ನಟಿಸಿ) ಅಂದ್ರ ಹೇಂಗ್ಮಾಡಿರಿ, ತಮ್ಮಣರಾಯ್ರು.... ಎಷ್ಟೋ ಸಾಮಾನು ಅಷ್ಟು ದಿವಸ ಉಳಿಯಲಿಕ್ಕಿಲ್ಲ—ಅಂದ್ರ ಇಟ್ಟಿಟ್ಟು ಕೆಡೋ ಸಾಮಾನಿನ ಮಾತ್ಹೇಳಿದೆ....ಅದ್ನ ಅಂಥಾವ್ನೆಲ್ಲ ಹೊರಗ ಇಡೋದ್ಕಿಂತ ಆದಷ್ಟು ಲಗೂನೆ (ಸನ್ನೆಯಿಂದ ತಿನ್ನುವುದನ್ನು ತೋರಿಸಿ) ಒಳಗೇ ಹಾಕಿ ಇಟ್ಬಿಡ್ರಿ— (ನಗೆಯಿಂದ) ದೇವ್ರೇ ಕೊಟ್ಟ ಹಗೇದೊಳ್ಗ !

**ಸಂಸಾರಿಗ** : — (ತುಸು ಸಿಟ್ಟಿನಿಂದ) ಹನುಮಂತ್ರಾಯಾ, ಇವತ್ತು ನೀನು

ಚೇಷ್ಟಾ ಮಾಡ್ತೀ, ಮಾಡು .... ಕೆಟ್ಟಾತು ಆಡ್ಬಾರ್ದು, ಆದ್ರೂ ಹೇಳ್ತೀನಿ ...ಒಂದೇ ಬಂಗಾಲಧಾಂಗ ಕೆಟ್ಟ ವ್ಯಾಳ್ಯಾ ಬಂದಿತೂ ಅಂದ್ರ- ಆಗ ತಿಳಿದೀತು—ನನ್ನ ಬುದ್ಧಿವಂತಿಕೆ!

**ಹನುಮಂತ್ರಾಯ** :— (ಕೈಚೆಲ್ಲಿ) ಆಗ್ತಿಳಿದು ಏನ್ಮಾಡೋದ್ಬೇಳ್ರಿ—ಎಲ್ಲಾರ್ನೋಡಿ ನಮ್ಗೂ ವ್ಯಾಲಿನ ರೇಶನಿಸಂಗ್ಳೀ ಕಾರ್ಡೇ ಸಿಕ್ಕೀತು.... ಆದ್ರೂ, ಒಂದ್ಮಾತ್ರ ನಿಮ್ಗ ಸುಖ ನೋಡ್ರಿ....ಅಂಥ ಕೆಟ್ಟ ವ್ಯಾಳ್ಯೆ ಬಂದ್ರ ನಿಮ್ಗ ಎಷ್ಟು ತಿಂದ್ರೂ ಹೊಟ್ಟೆ ನೋವು ಆಗ್ಲಿಕ್ಕಿಲ್ಲ— ಯಾಕಂದ್ರೆ, ನಿಮ್ಮನ್ನೋಡಿ ಹೊಟ್ಟೆಕಿಚ್ಚು ಮಾಡಿಕೊಳ್ಳಿಕ್ಕೆ ಇರ್ತಾನ ಯಾವ? ಅಂ? ಹಹ! (ಎನ್ನುತ್ತ ಹೋಗುವನು)

**ಸಂಸಾರಿಗ** :— (ಆಶ್ಚರ್ಯದ ಕಳೆಯಿಂದ) ಲಕ್ಷಣೇನೋ ನೆಟ್ಟಗ ಕಾಣೋದಿಲ್ಲ—(ಎನ್ನುತ್ತ ಒಳಗೆ ಹೊರಡುವಾಗ)

[' ತರಿಸಿದ್ರ ತಿರುಗಿ ಕಳಿಸ್ತೀನಿ ಬಿಡ್ರಿ' ಎಂಬ ದನಿ, ಅದನ್ನು ಕೇಳಿ ತಟ್ಟನೆ ಆತ್ಮಸಂರಕ್ಷಣೆಗೆ ಮೈ ಬಿಗಿದು ನಿಲ್ಲುವ ಹುಲಿಯಂತೆ ನಿಂತು ಹೊರಬಾಗಿಲತ್ತ ನೋಡುವನು. ಅದೇ ಸಮಯದಲ್ಲಿ ಅವನ ಹಿರಿಯ ಮಗ ಶೀನೂ ಬರುವನು.]

**ಸಂಸಾರಿಗ** :— ಯಾರೊ? ಏನೊ ಅದು?

**ಶೀನೂ** :— ಹನುಮಂತ್ರಾಯ್ರು ಏನೊ ಅಂದ್ರು —

**ಸಂಸಾರಿಗ** :— ಅವರ ಮಾತು ನಿನಗೇನ್ಮಾಡೋದು? ನೀ ಎಲ್ಲಿಗೆ ಹೋಗಿದ್ದೆ?

**ಶೀನೂ** :— ಹೆಣ ಹೊರಲಿಕ್ಕೆ.

**ಸಂಸಾರಿಗ**:-(ಮೈಲಿಗೆಯಾದಂತೆ ಸಿಡಿದು) ಏನು? ಏನಂದಿ? ಬುದ್ಧಿ ಅದನೊ ಇಲ್ಲೊ? ನಾಯಿನ್ನೂ ಜೀವ್ದಿಂದಿದ್ದೀನಿ, ಕಾಣಿಸ್ತೀದೊ ಇಲ್ಲೊ?

**ಶೀನೂ** :—(ತಿಳಿಯದವನಂತೆ ನಟಿಸಿ) ಅದೇ-ಹನುಮಂತ್ರಾಯ್ರೂ ಹೇಳಿದ್ರು, ಇನ್ನೂ ಎರಡು ವರ್ಷ ಬದುಕಲೇ ಬೇಕೂ ಅಂತ ಸಂಗ್ರಹ ಮಾಡೀರಿ ಅಂತ—

**ಸಂಸಾರಿಗ** :— (ತಿರಸ್ಕಾರ ತೋರಿಸಿ) ಹಃ! ಚಾಡಿ ಖೋರ! ಬಾಯ್ಗೆ ಬಂದದ್ದು ಬಕಾಸ್ತಾನೆ!

**ಶೀನೂ** :— ಕೈಗೆ ಸಿಕ್ಕದ್ದು ನೀವು ಬಕಾಸ್ತೀರಿ ಅಂತ ಆವ್ರು ಹೇಳಿದ್ರು—

**ಸಂಸಾರಿಗ :**— (ಅಧಿಕಾರದಿಂದ ಗದ್ದರಿಸಿ) ಹುಂ—ಸಾಕಿನ್ನು ನಿನ್ನ ಪಾಂಡಿತ್ಯ! ಹುಚ್ಮುಂಡೇಗಂಡ! ಒಂದಿಷ್ಟು ಕೂಳಿರಲಿಲ್ಲ ಅಂದ್ರೆ ತಾಯೀ ಮ್ಯಾಲಿ ಒದರಾಡ್ತಾನ— ! ನಿನಗೇನ್ ತಿಳೀತದ ವ್ಯವಹಾರ ?

**ಶೀನೂ :**— ನನ್ಗ ಇಷ್ಟು ವರ್ಷ ಇರ್ಬೇಕು ಅಂತ ಹಟ ಇಲ್ಲ; ನಾಲ್ಕು ಮಂದೀ ಜೋಡಿ ಇರ್ಬೇಕೂ ಅಂತ ಹಟ. ಅದ್ಕ ಸಂಗ್ರಹದೊಳ್ಗಿನ ನನ್ನ ಪಾಲಿನ್ದು ನಾಲ್ಕು ಮಂದೀಗೆ ಹಂಚ್ಬೇಸಿ ನಾನು.

**ಹೆಂಡತಿ :**— (ಒಮ್ಮೆಲೆ ಬಂದು) ಅಯ್ಯ! ಶೀನಾ, ನಿನ್ಮಾತು ಕೇಳಿದ ಕೂಡ್ಲೆ ನೆನಪಾಯ್ತು ನೋಡೆ! ಆ ಮ್ಯಾಲಿನ ಮನೆ ಮುಂವಕ್ಕನಲ್ಲಿ ನಾಲ್ಕು ದಿವ್ಸಾತು ಅಕ್ಕೀನೇ ಇಲ್ಲಾ ಅಂತ, ಒಂದಿಷ್ಟು ಕೊಟ್ಟು ಬರ್ತೀಯಾ ?

**ಸಂಸಾರಿಗ :**—(ಒಮ್ಮೆಲೆ ಹುಚ್ಚೆದ್ದವನಂತೆ) ಏ! ನಡೀ! ನಡೀ ನೀ ಇಲ್ಲಿಂದ! ಒಬ್ಬರು ಬೆಂಕಿ ಹಚ್ಕ ಅಂದ್ರ ಒಬ್ರು ಕಡ್ಡೀ ಕೊರೆದ್ರಂತೆ! ಬಂದಾ-ಳಿಲ್ಲಿ 'ಕೊಟ್ಟು ಬರ್ತೀಯಾ ?' ಅಂತ ?

**ಶೀನೂ :**— ಅಪ್ಪಾ, ಬೆಂಕಿ....ಕಡ್ಡಿ ಅಂದದ್ದಾಡ್ಲೆ ವಿಚಾರ ಹೊಳೆಯಿತು— (ಕಿಸೆಯೊಳಗಿನ ಕಡ್ಡಿಯ ಪೆಟ್ಟಿಗೆಯನ್ನು ತೆಗೆಯುವನು).

**ಸಂಸಾರಿಗ :**— (ಗಾಬರಿಯಿಂದ ಚೀರುತ್ತ) ಏ-ಏ-ಏನ್ಮಾಡ್ತೀಯೋ ?

**ಶೀನೂ :**— (ತಾಯ್ತಂದೆಯರ ನಡುವೆ ನಿಂತು) ಅನ್ನಕ್ಕೂ ಬೆಂಕಿಗೂ ಬಹಳ ಸಂಬಂಧ— (ತಾಯಿಗೆ) ಕಾಳಿಟ್ಟ ಕೋಣೆ ಯಾವುದವ್ವಾ ?

**ಹೆಂಡತಿ :**— ಬಿಡೋ! ಏನಿಲ್ದ ರಂಭಾಟ! ಮುಂಚೆ ಅವರ್ಗಿಷ್ಟು ಅಕ್ಕೀ ಕೊಟ್ಟು ಬಾ....

**ಸಂಸಾರಿಗ :**— (ಒಮ್ಮೆಲೆ ಹತಾಶನಂತೆ) ಅಲ್ಲ – ನಿಮ್ಗೇನಾದ್ರೂ ವಿಚಾರ ಆದನ ?—ಎಷ್ಟು ಕಷ್ಟಪಟ್ಟು, ನಿಮ್ಮೆಲ್ಲರ ಸಲುವಾಗಿ—

**ಹೆಂಡತಿ :**— (ನಡುವೆಯೆ) ಅಯ್ಯ! ಆತೀನೇ ಯಾವ್ದ ಕಾವ್ರ! ಈಗೇನೂ ಮನೆ-ಮಾರು ಹಂಚಿ ಗುಳೇಕ್ಕ ಹೊಂಟೇವೆ ನಾವು—

**ಸಂಸಾರಿಗ :**— ಜನ್ರು ಕೂಳಿಲ್ದೆ ಸಾಯೋವಾಗ, ನಿಮ್ಗ ಎರಡು ವರ್ಷ ಹೊಟ್ಟೆತುಂಬುವಷ್ಟು—

**ಶೀನೂ :**— ಎಲ್ಲಾರೂ ಸತ್ತರೆ ನಾನೂ ಸಾಯುವವನೆ!

**ಹೆಂಡತಿ :**— (ಅಧಿಕಾರದಿಂದ) ಸಾಕೊ! ಕೆಟ್ಟಕೆಟ್ಟ ಮಾತಾಡಬ್ಯಾಡ!

**ಶೀನೂ** :— ಎಲ್ಲಾರೂ ಸಾಯೋವಾಗ ಇರೋದ್ಕಿಂತ ಎಲ್ಲಾರೂ ಇರುವಾಗ ಸಾಯೋದೇ—

**ಹೆಂಡತಿ** :— ಸುಮ್ನೆ ಕೂಡೊ! ಒಂದು ಮುಷ್ಟಿ ಅಕ್ಕಿ ಕೊಟ್ಟರ ನಾವೇನು ಉಪವಾಸ ಸಾಯೋದಿಲ್ಲ, ತಿಂದವರೂ ಬದುಕಿರಾರು.

**ಸಂಸಾರಿಗ** :— ನಾಳೆ—ನಾಳೆ—ಅನ್ನಕ್ಕೆ ಅಭಾವ ಬಂದ್ರೆ—ತಿಳಿದೀತು—ತಿಳಿದೀತು ಅಂದೆ?

**ಹೆಂಡತಿ** :— ಇದ್ದಾಗ ಕೊಟ್ಟವ್ರಿಗೆ ಇಲ್ಲಾಗ ದೇವ್ರು ಕೊಟ್ಟಾನು. ಶೀನಾ, ಲಗೂ ಹೋಗಿ ಕೊಟ್ಟ್‌ಬರ್ತೀಯೋ ಇಲ್ಲೋ—ನನ್ಗ ಅಡಿಗೀಗೆ ತಡ ಆಯ್ತು— ( ಒಳಗೆ ಹೋಗುವಳು ).

**ಸಂಸಾರಿಗ** :— ( ಮಗನಿಗೆ ) ಏ, ಕಡ್ಡಿಯ ಪೆಟ್ಟಿಗೆ ಇಸ್ಕಾದ್ರೂ ಕಿಸೇಕ್ಕ ಹಾಕೊ!

**ಶೀನೂ** :— ( ಅವನ್ನ ಕೈಯಿಗೆ ಕೊಡುತ್ತ ) ಆಯ್ತಲ್ಲೊ ನಿಮಗ ಸಮಾಧಾನ? ಕಡ್ಡಿಯ ಪೆಟ್ಟಿಗೆ ಸಿಗದಿದ್ರೂ ನಡೀತದ.. ಬರೀ ಕಾಳು ತಿಂದ್ರೂ ಅನ್ನ ಆಗ್ತದ— ಹೊಟ್ಟೀವಳಗಿನ ಬೆಂಕೀಗೆ!

**ಸಂಸಾರಿಗ** :— ನೀವು ಕಾಳು ಮುಂದಿಗೆ ಕೊಡೋದಕ ನನ್ನ ಹೊಟ್ಟೆಯೊಳಗ ಇನ್ನಿಷ್ಟು ಬೆಂಕಿ ಬಿದ್ದದ.

**ಶೀನೂ** :— ( ಒಳಗೆ ಹೊರಡುತ್ತ ) ಅದು ಮುಂದಿಯು ಜೀವ ತಿಂದೇ ಶಾಂತ ಆಗೋ ಬಕಾಸುರನ ಜಠರಾಗ್ನಿ! ( ಹೋಗುವನು ).

[ ಸಂಸಾರಿಗನು ಹಣೆ ಹಣೆ ಬಡಿದುಕೊಳ್ಳುವಾಗ— ]

( ತೆರೆ )